ಅಲ್ಲದೇ ವಿವಾದಾಂಶ 1 ರಿಂದ 3ಕ್ಕೆ ಉತ್ತರಿಸುವಾಗ ಈಗಾಗಲೇ ಚರ್ಚಿಸಿದ ವಿಷಯಗಳನ್ನು ಅವಲೋಕಿಸುವುದರಿಂದ ಹಾಗೂ ದಿನಾಂಕ:22.01.2009ರಂದು ನೀಡಲಾದ 43ಬಿ ನೋಟಿಸಿಗೆ ಸದರಿ ವಾಹನದ ಮಾಲೀಕರು ದಿನಾಂಕ:07.02.2008ರಲ್ಲಿನ ಉತ್ತರದಲ್ಲಿ ಜೀಪ್ ಸಂಖ್ಯೆ: ಕೆಎ–12–ಎಂ–8837 ರಲ್ಲಿ ದಿನಾಂಕ:03.04.2001ರಂದು ಅಕ್ರಮವಾಗಿ ಶೇಂದಿಯನ್ನು ಸಾಗಾಟ ಮಾಡಿರುವುದು ಸಾಬೀತಾಗಿರುವುದರಿಂದ ವಶಪಡಿಸಿಕೊಳ್ಳಲಾದ ವಾಹನ ಸಂಖ್ಯೆ: ಕೆಎ–12–ಎಂ–8837 ರನ್ನು ಮಧ್ಯಂತರಿಕವಾಗಿ ಬಿಡುಗಡೆಗೊಳಿಸಿರುವ ದಿನಾಂಕ:29.09.2001ರಂದಿನ ಆದೇಶ ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:175:2001–02ನ್ನು ರದ್ದುಗೊಳಿಸಿ ಹಿಂಪಡೆಯಲು ಉದ್ದೇಶಿಸಲಾಗಿದ್ದು ಕಲಂ 43(ಬಿ) ರಂತೆ ವಾಹನದ ಮಾಲೀಕರು ನಿರಾಪರಾಧಿತ್ವವನ್ನು ಪುರಾವೆ ಮಾಡಲು ವಿಫಲರಾಗಿರುವುದರಿಂದ ಮತ್ತು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಸಿ ಹಾಗೂ 43ಎ (3) ರನ್ವಯವಾಗಿ ಕ್ರಮವಾಗಿ ವಾಹನದಲ್ಲಿದ್ದ 25 ಲೀ. ಶೇಂದಿಯನ್ನು ದಿನಾಂಕ:22.12.2005ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದ್ದು ನಾಶಪಡಿಸಲು ಆದೇಶವಾಗಿರುವುದರಿಂದ ಜೀಪ್ ಸಂಖ್ಯೆ: ಕೆಎ–12–ಎಂ–8837 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ ಎಂದು ಕಂಡುಬರುವುದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:175:2001–02, ದಿನಾಂಕ:10ನೇ ಫೆಬ್ರವರಿ, 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಮುಖ್ಯಾಂಶಗಳ ಹಿನ್ನೆಲೆಯಲ್ಲಿ ಸಿ.ಎಲ್. ಜಯರಾಂ, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ವಾಹನ ಸಂಖ್ಯೆ: ಕೆಎ–12–ಎಂ–8837ರನ್ನು ಮಧ್ಯಾಂತರಿಕವಾಗಿ ಬಿಡುಗಡೆ ಮಾಡಿರುವ ದಿನಾಂಕ:29.09.2001ರ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಿ ಹಿಂತೆಗೆದುಕೊಂಡಿರುತ್ತೇನೆ. ಹಾಗೂ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ರ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಹಾಯಕ ಪೊಲೀಸ್ ಉಪ ನಿರೀಕ್ಷಕರು, ಶ್ರೀಮಂಗಲ ಪೋಲಿಸ್ ಠಾಣೆ, ಶ್ರೀಮಂಗಲ ಇವರು ದಾಖಲಿಸಿದ ಪ್ರಥಮ ವರ್ತಮಾನ ವರದಿ ಸಂಖ್ಯೆ:43:2001 ದಿನಾಂಕ:03.04.2001ರಲ್ಲಿ ಜಪ್ತು ಮಾಡಿದ ವಾಹನ ಸಂಖ್ಯೆ:ಕೆಎ–12–ಎಂ–8837ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ:10.02.2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

**ಸಿ.ಎಲ್. ಜಯರಾಂ**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಕೊಡಗು ಜಿಲ್ಲೆ, ಮಡಿಕೇರಿ.

**ಅನುಬಂಧ**

**ಅನುಬಂಧ–1**

**ಅಭಿಯೋಗದ ಪರ ಸಾಕ್ಷಿಗಳು**

ಪಿಡಬ್ಲ್ಯೂ–1 ಶ್ರೀ ಟಿ.ಕೆ. ಮರಿಯಪ್ಪ, ಎ.ಎಸ್.ಐ. ಮೂರ್ನಾಡು

ಪಿಡಬ್ಲ್ಯೂ–2 ಶ್ರೀ ಬಿ.ಸಿ. ಬಾಲ, ಬಿನ್ ಚಾಮಿ, ಶ್ರೀಮಂಗಲ

**ಅನುಬಂಧ–2**

**ಪ್ರತಿವಾದಿಗಳ ಪರ ಸಾಕ್ಷಿಗಳು**

ಡಿಡಬ್ಲ್ಯೂ–1 ಶ್ರೀ ಎಂ.ಎಂ.ಬಿದ್ದಪ್ಪ ಬಿನ್ ಮಾದಪ್ಪ, ವಾಹನದ ಮಾಲೀಕರು
ಹರಿಹರ ಗ್ರಾಮ & ಅಂಚೆ, ವಿರಾಜಪೇಟೆ ತಾಲ್ಲೂಕು.

**ಅನುಬಂಧ–3**

**ಅಭಿಯೋಗದ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ–1 ಪಿ–1 ಮತ್ತು ಪಿ1ಎ :ಸ್ಥಳದ ಅಪರಾದ ವಿವರ ನಮೂನೆ ಮತ್ತು ಪ್ರಥಮ ವರ್ತಮಾನ ವರದಿಯಲ್ಲಿ ಸಹಿ.

ನಿಶಾನೆ–2 ಪಿ–2 ಮತ್ತು ಪಿ–2ಎ: ಪ್ರ.ವ.ವ.ಸಂ: 43/2001ರ ಪ್ರತಿ ಮತ್ತು ಸಹಿ.

ನಿಶಾನೆ–3 ಪಿ–3 ಮತ್ತು ಪಿ3ಎ : ದಿ:03.04.2001ರ ಮ್ಯಾಜಿಸ್ಟ್ರೇಟ್ ರವರಿಗೆ ಕಳುಹಿಸಿದ ಸ್ವತ್ತಿನ ಪಟ್ಟಿ ಮತ್ತು ಸ್ವತ್ತು ಜಪ್ತಿ ಪಂಚನಾಮ ಸಹಿ.

ನಿಶಾನೆ–4 ಪಿ–4 ಮತ್ತು ಪಿ–4ಎ : ದಿ:04.04.2001ರ ಪೊಲೀಸ್ ಉಪ ನಿರೀಕ್ಷಕರು, ಶ್ರೀಮಂಗಲ ಪೊಲೀಸ್ ಠಾಣೆ, ಶ್ರೀಮಂಗಲ ಇವರ ಪತ್ರ ಹಾಗೂ ಕರ್ನಾಟಕ ಅಬಕಾರಿ ಕಾಯಿದೆ 43ಎ ರನ್ವಯ ಸಲ್ಲಿಸಿರುವ ವರದಿ.

ನಿಶಾನೆ–5 ಪಿ–5 : ಪೊನ್ನಂಪೇಟೆ ಉಪ ವಲಯದ ಅಬಕಾರಿ ಉಪ ನಿರೀಕ್ಷಕರು ರವರು

ಪಿ5(ಎ) : ದಿನಾಂಕ:20.04.2001 ರಂದು ಶ್ರೀಮಂಗಲ ಪೊಲೀಸ್ ಉಪ ನಿರೀಕ್ಷಕರಿಂದ ಪ್ರಕರಣದ ಸೊತ್ತು ಹಾಗೂ ದಾಖಲೆ ಪಡೆದ ಬಗ್ಗೆ ಮಾಹಿತಿ ಪತ್ರ.

ನಿಶಾನೆ 6 ಪಿ 6: ರಾಸಾಯನಿಕ ವಿಶ್ಲೇಷಣಾ ವರದಿಯ ದೃಢೀಕೃತ ನಕಲು.

**ಅನುಬಂಧ–4**

**ಪ್ರತಿವಾದಿಗಳ ಪರ ಮಂಡಿಸಲಾದ ದಾಖಲಾತಿಗಳು**

– ಯಾವುದು ಇರುವುದಿಲ್ಲ –

ಅಧಿಕೃತ ಅಧಿಕಾರಿಗಳು ಹಾಗೂ

ಪಿ.ಆರ್.171 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಕೊಡಗು ಜಿಲ್ಲೆ, ಮಡಿಕೇರಿ.

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ**

**ಅಧಿಸೂಚನೆ**

**ಸಂಖ್ಯೆ: ಎ3–ಸಿಓಎನ್–ಸಿಆರ್–9/2009–10, ದಿನಾಂಕ:10ನೇ ಜುಲೈ, 2009**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಅರಣ್ಯ ಅಪರಾಧ ಪ್ರಕರಣ ಸಂಬಂಧ ಕೆಳಕಂಡ ವಾಹನಗಳನ್ನು ತರೀಕೆರೆ ವಲಯದ ಲಿಂಗದಹಳ್ಳಿ ಶಾಖೆಯ ವನಪಾಲಕರು ಹಾಗೂ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್–71(ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ.

| ಕ್ರ. ಸಂ. | ಮೊಕದ್ದಮೆ ಸಂಖ್ಯೆ | ವಾಹನಗಳ ವಿವರ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | ತರೀಕೆರೆ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ: 37/2009–10, ದಿನಾಂಕ:01.07.2009 | ಒಂದು ಮಾರುತಿ ಓಮಿನಿ ವ್ಯಾನ್ ಸಂಖ್ಯೆ: ಕೆಎ–17–ಎಂ–793 ಹಾಗೂ ಬೀಟೆ ತುಂಡುಗಳು 7=0.224 ಮತ್ತು ಒಂದು ಗ್ಯಾಸ್ ಸಿಲಿಂಡರ್ | N2040247 | STQIN938371 |

ಈ ಮೇಲ್ಕಂಡ ವಾಹನದ ನಿಜವಾದ ವಾರಸುದಾರರು ಯಾರದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾದ್ಯತೆಗಳನ್ನು ಈ ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡಲು ಉಪಯೋಗಿಸಿದಕ್ಕಾಗಿ ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ಈ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಎಸ್. ವೆಂಕಟೇಸನ್**

ಪಿ.ಆರ್.657 ಉಪ ಅರಣ್ಯ ಸಂರಕ್ಷಣಾಧಿಕಾರಿ,

ಭದ್ರಾವತಿ ವಿಭಾಗ, ಭದ್ರಾವತಿ.

**IN THE COURT OF THE 5TH ADDITIONAL CHIEF METROPOLITAN MAGISTRATE, BANGALORE CITY**

**Notification No. /2009, Dated:20th July, 2009**

It is hereby notified for the information of the public that the unclaimed properties mentioned under are in the custody of the Kumarswamy layout Police Station, Bangalore City, as unclaimed shall be confiscted to the Government, and disposed off according to law of not claimed by the owner with proof of ownership within one months from the date of the publication of notification.

| Sl. No. | "C" Mise/ CR.No. | PF-No. | Vehicle No. Eng & Chassis No. |
|---|---|---|---|
| 1. | Cimiss No.208/05 | 40/05 | KA-05-EJ-7690 TVS Victore GLX |
| 2. | Cimiss No.527/05 | 125/05 | KA-05-J-3762, Kinetic Honda |

| Sl. No. | "C" Mise/ CR.No. | PF-No. | Vehicle No. Eng & Chassis No. |
|---|---|---|---|
| 3. | Cimiss No.529/05 | 127/05 | KA-04-L-7026, RTZ Bike |
| 4. | Cimiss No.634/06 | 125/06 | CKW-6704, TVS Champ |
| 5. | Cimiss No.357/08 | 85/08 | TN-31-B-0894, Suzuki Bike |
| 6. | Cimiss No.358/08 | 86/08 | KA-05-EA-3523, TVS Moped |
| 7. | Cimiss No.359/08 | 87/08 | KA-01-E-1583, Kinetic Honda |
| 8. | Cimiss No.360/08 | 88/08 | KA-04-L-2293, Kawasaki Bajaj |
| 9. | Cimiss No.369/08 | 90/08 | CNN-1692, RX Yamaha |
| 10. | Cimiss No.370/08 | 89/08 | KA-04-X-1052, Kinetic Style |
| 11. | Cimiss No.371/08 | 91/08 | KA-02-X-3426, Bajaj Bike |
| 12. | Cimiss No.372/08 | 92/08 | CKN-9969, Bajaj Scooter |
| 13. | Cimiss No.429/08 | 104/08 | KA-05-V-6014, Bajaj Bike |
| 14. | Cimiss No.430/08 | 105/08 | KA-05-R-7594, TVS Champ |
| 15. | Cimiss No.433/08 | 106/08 | KA-05-S-6098, Kinetic Honda |
| 16. | Cimiss No.435/08 | 107/08 | ATN-3730, TVS Bike |
| 17. | Cimiss No.437/08 | 108/08 | CKK-9372, Bajaj Scooter |
| 18. | Cimiss No.439/08 | 109/08 | KA-03-J-1915, Hero puch |
| 19. | Cimiss No.442/08 | 110/08 | KL-10-N-6232, Hero Honda Spl. |
| 20. | Cimiss No.443/08 | 111/08 | KA-09-K-6509, Hero puch |
| 21. | Cimiss No.447/08 | 114/08 | KA-05-S-8717, Suzuki Bike |
| 22. | Cimiss No.448/08 | 115/08 | CNA-554, TVS Moped |
| 23. | Cimiss No.188/09 | 39/09 | KA-20-S-5548, Bajaj Pulser |

PR-655 Vth Addl. Chief Metropolitan Magistrate, Bangalore.

**ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಯವರ ಕಛೇರಿ, ಸಾರಥಿಭವನ, ಅಜ್ಜರಕಾಡು, ಉಡುಪಿ**

**ಪ್ರಕಟಣೆ**

**ಸಂಖ್ಯೆ: ಬಿಸಿಎಂಉ:ಹಿವಕಾತಶೀವೆ:ಸಿಆರ್:21:2009–10, ದಿನಾಂಕ:10ನೇ ಜುಲೈ, 2009**

**ವಿಷಯ:** ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿ ನೀಡಿ ಶಿಷ್ಯವೇತನ ಮಂಜೂರು ಮಾಡಲು ಅರ್ಜಿಗಳನ್ನು ಆಹ್ವಾನಿಸುವ ಕುರಿತು.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್:68:ಎಸ್‌ಇಡಬ್ಲ್ಯೂ:89: ದಿನಾಂಕ:02.11.1990.
2) ಸರ್ಕಾರಿ ಆದೇಶ ಸಂಖ್ಯೆ: ಸಕಇ:446:ಬಿಎಂಎಸ್:2005, ದಿನಾಂಕ:01.11.2005.

ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ವಕೀಲಿ ವೃತ್ತಿಯಲ್ಲಿ ತರಬೇತಿ ನೀಡಿ ಶಿಷ್ಯವೇತನ ಮಂಜೂರು ಮಾಡಲು ಜಿಲ್ಲೆಯ ಅರ್ಹ ಮತ್ತು ಆಸಕ್ತ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ನಿಗದಿತ ಅರ್ಜಿ ನಮೂನೆಗಳನ್ನು ಈ ಕಛೇರಿಯಿಂದ ಕಛೇರಿ ಕೆಲಸದ ಸಮಯದಲ್ಲಿ ಪಡೆದುಕೊಳ್ಳಬಹುದು.

1) ಅರ್ಜಿ ಸಲ್ಲಿಸುವ ಕಾನೂನು ಪದವೀಧರರು ಹಿಂದುಳಿದ ವರ್ಗಗಳ ಪ್ರವರ್ಗ–1, 2ಎ, 3ಎ, ಮತ್ತು 3ಬಿ ಗಳಿಗೆ ಸೇರಿದವರಾಗಿರಬೇಕು. ಪ್ರವರ್ಗ 1 ನ್ನು ಹೊರತುಪಡಿಸಿ ಇತರೆ ಪ್ರವರ್ಗಗಳಿಗೆ ಸೇರಿದ ಅಭ್ಯರ್ಥಿ ಪೋಷಕರ ಕುಟುಂಬದ ವಾರ್ಷಿಕ ಆದಾಯವು ರೂ.15000/–ಗಳ ಮಿತಿಯಲ್ಲಿರಬೇಕು.

2) ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಿಂದ ಹಿಂದಿನ ಎರಡು ವರ್ಷಗಳೊಳಗೆ ಕಾನೂನು ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

3) ಹಿಂದುಳಿದ ವರ್ಗಗಳ ಪ್ರವರ್ಗ–2ಎ, 3ಎ, ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಗರಿಷ್ಟ 30 ವರ್ಷಗಳ ವಯೋಮಿತಿಯಲ್ಲಿ ಇರಬೇಕು. ಪ್ರವರ್ಗ 1ಕ್ಕೆ ಸೇರಿದ ಅಭ್ಯರ್ಥಿಗಳು ಗರಿಷ್ಟ 31 ವರ್ಷಗಳ ವಯೋಮಿತಿಯೊಳಗಿರಬೇಕು.

4) ಅಭ್ಯರ್ಥಿಗಳು ತಮ್ಮ ಹೆಸರನ್ನು ಬಾರ್ ಕೌನ್ಸಿಲ್‌ನಲ್ಲಿ ನೊಂದಾಯಿಸಿರಬೇಕು.

5) ತರಬೇತಿಗೆ ಆಯ್ಕೆಯಾಗುವ ಅಭ್ಯರ್ಥಿಗಳಿಗೆ ಅನುಭವಿ ಹಾಗೂ ನುರಿತ ವಕೀಲರ ಅಧೀನದಲ್ಲಿ ವಕೀಲಿ ವೃತ್ತಿಯಲ್ಲಿ ತರಬೇತಿ ಕೊಡಿಸಿ ನಾಲ್ಕು ವರ್ಷಗಳ ವರೆಗೆ ಮಾಹೆಯಾನ ರೂ.1000/– ಗಳಂತೆ ಶಿಷ್ಯವೇತನ ನೀಡಲಾಗುವುದು.

6) ಆಸಕ್ತ ಅಭ್ಯರ್ಥಿಗಳು ನಿಗದಿತ ಅರ್ಜಿಯನ್ನು ಪಡೆದು ಸಂಪೂರ್ಣವಾಗಿ ಭರ್ತಿ ಮಾಡಿ ಕಾನೂನು ಪದವಿಗೆ ಸಂಬಂಧಿಸಿದ ಎಲ್ಲಾ ಅಂಕಪಟ್ಟಿಗಳ ದೃಢೀಕೃತ ಪ್ರತಿಗಳು, ಬಾರ್ ಕೌನ್ಸಿಲ್ ನೋಂದಾವಣೆ ಪತ್ರದ ಪ್ರತಿ ಮತ್ತು ಜಾತಿ, ಆದಾಯ ಪ್ರಮಾಣ ಪತ್ರಗಳನ್ನು ಲಗತ್ತಿಸಿ ಸಲ್ಲಿಸಬೇಕು.

7) ಅರ್ಜಿಗಳನ್ನು ಅವಶ್ಯವಿರುವ ದಾಖಲಾತಿಗಳೊಡನೆ ದಿನಾಂಕ:18.08.2009 ರೊಳಗೆ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಸಾರಥಿಭವನ, ಅಜ್ಜರಕಾಡು, ಉಡುಪಿ ಇವರಿಗೆ ಸಲ್ಲಿಸಬೇಕು.

8) ನಿಗದಿತ ದಿನಾಂಕದ ನಂತರ ಬರುವ ಮತ್ತು ಅಪೂರ್ಣವಾದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಹೆಚ್ಚಿನ ಮಾಹಿತಿಗಾಗಿ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಸಾರಥಿಭವನ, ಅಜ್ಜರಕಾಡು, ಉಡುಪಿ, ಇವರನ್ನು ಸಂಪರ್ಕಿಸಬಹುದು (ದೂರವಾಣಿ ಸಂಖ್ಯೆ:0820–2531581)

ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು
ಅಲ್ಪಸಂಖ್ಯಾತರ ಇಲಾಖೆ, ಉಡುಪಿ.

**ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಯವರ ಕಛೇರಿ, ಸಾರಥಿಭವನ, ಅಜ್ಜರಕಾಡು, ಉಡುಪಿ**

**ಪ್ರಕಟಣೆ**

**ಸಂಖ್ಯೆ: ಬಿಸಿಎಂಉ:ಅ.ಸಂ.ಕಾ.ತ.ಶೀ.ವೆ:ಸಿಆರ್:22:2009–10, ದಿನಾಂಕ:10ನೇ ಜುಲೈ, 2009**

**ವಿಷಯ:** ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿ ನೀಡಿ ಶಿಷ್ಯವೇತನ ಮಂಜೂರು ಮಾಡಲು ಅರ್ಜಿಗಳನ್ನು ಆಹ್ವಾನಿಸುವ ಕುರಿತು.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್:68:ಎಸ್ಇಡಬ್ಲ್ಯೂ:89: ದಿನಾಂಕ:02.11.1990.

2) ಸರ್ಕಾರಿ ಆದೇಶ ಸಂಖ್ಯೆ: ಸಕಇ:446:ಬಿಎಂಎಸ್:2005, ದಿನಾಂಕ:01.11.2005.

ಅಲ್ಪಸಂಖ್ಯಾತರ ವರ್ಗಗಳಿಗೆ ಸೇರಿದ (ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧರು ಮತ್ತು ಸಿಕ್ಕರು) ಕಾನೂನು ಪದವೀಧರರಿಗೆ ವಕೀಲಿ ವೃತ್ತಿಯಲ್ಲಿ ತರಬೇತಿ ನೀಡಿ ಶಿಷ್ಯವೇತನ ಮಂಜೂರು ಮಾಡಲು ಜಿಲ್ಲೆಯ ಅರ್ಹ ಮತ್ತು ಆಸಕ್ತ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ನಿಗದಿತ ಅರ್ಜಿ ನಮೂನೆಗಳನ್ನು ಈ ಕಛೇರಿಯಿಂದ ಕಛೇರಿ ಕೆಲಸದ ಸಮಯದಲ್ಲಿ ಪಡೆದುಕೊಳ್ಳಬಹುದು.

1) ಅರ್ಜಿ ಸಲ್ಲಿಸುವ ಕಾನೂನು ಪದವೀಧರರು ಅಲ್ಪಸಂಖ್ಯಾತರ ಸಮುದಾಯಕ್ಕೆ (ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧರು ಮತ್ತು ಸಿಕ್ಕರು) ಸೇರಿದವರಾಗಿರಬೇಕು. ಅಭ್ಯರ್ಥಿಗಳ ಕುಟುಂಬದ ವಾರ್ಷಿಕ ಆದಾಯವು ರೂ.15000/–ಗಳ ಮಿತಿಯಲ್ಲಿರಬೇಕು.

2) ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಿಂದ ಹಿಂದಿನ ಎರಡು ವರ್ಷಗಳೊಳಗೆ ಕಾನೂನು ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

3) ಅಭ್ಯರ್ಥಿಗಳು ತಮ್ಮ ಹೆಸರನ್ನು ಬಾರ್ ಕೌನ್ಸಿಲ್‌ನಲ್ಲಿ ನೊಂದಾಯಿಸಿರಬೇಕು.

4) ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಗರಿಷ್ಟ 30 ವರ್ಷಗಳ ವಯೋಮಿತಿಯಲ್ಲಿ ಇರಬೇಕು.

5) ತರಬೇತಿಗೆ ಆಯ್ಕೆಯಾಗುವ ಅಭ್ಯರ್ಥಿಗಳಿಗೆ ಅನುಭವಿ ಹಾಗೂ ನುರಿತ ವಕೀಲರ ಅಧೀನದಲ್ಲಿ ವಕೀಲಿ ವೃತ್ತಿಯಲ್ಲಿ ತರಬೇತಿ ಕೊಡಿಸಿ ನಾಲ್ಕು ವರ್ಷಗಳ ವರೆಗೆ ಮಾಹೆಯಾನ ರೂ.1000/– ಗಳಂತೆ ಶಿಷ್ಯವೇತನ ನೀಡಲಾಗುವುದು.

6) ಆಸಕ್ತ ಅಭ್ಯರ್ಥಿಗಳು ನಿಗದಿತ ಅರ್ಜಿಯನ್ನು ಪಡೆದು ಸಂಪೂರ್ಣವಾಗಿ ಭರ್ತಿ ಮಾಡಿ ಕಾನೂನು ಪದವಿಗೆ ಸಂಬಂಧಿಸಿದ ಎಲ್ಲಾ ಅಂಕಪಟ್ಟಿಗಳ ದೃಢೀಕೃತ ಪ್ರತಿಗಳು, ಬಾರ್ ಕೌನ್ಸಿಲ್ ನೋಂದಾವಣೆ ಪತ್ರದ ಪ್ರತಿ ಮತ್ತು ಜಾತಿ, ಆದಾಯ ಪ್ರಮಾಣ ಪತ್ರಗಳನ್ನು ಲಗತ್ತಿಸಿ ಸಲ್ಲಿಸಬೇಕು.

7) ಅರ್ಜಿಗಳನ್ನು ಅವಶ್ಯವಿರುವ ದಾಖಲಾತಿಗಳೊಡನೆ ದಿನಾಂಕ:18.08.2009 ರೊಳಗೆ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಸಾರಥಿಭವನ, ಅಜ್ಜರಕಾಡು, ಉಡುಪಿ ಇವರಿಗೆ ಸಲ್ಲಿಸಬೇಕು.

8) ನಿಗದಿತ ದಿನಾಂಕದ ನಂತರ ಬರುವ ಮತ್ತು ಅಪೂರ್ಣವಾದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಹೆಚ್ಚಿನ ಮಾಹಿತಿಗಾಗಿ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಸಾರಥಿಭವನ, ಅಜ್ಜರಕಾಡು, ಉಡುಪಿ, ಇವರನ್ನು ಸಂಪರ್ಕಿಸಬಹುದು (ದೂರವಾಣಿ ಸಂಖ್ಯೆ:0820–2531581)

ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು
ಪಿ.ಆರ್.658 ಅಲ್ಪಸಂಖ್ಯಾತರ ಇಲಾಖೆ, ಉಡುಪಿ.

## ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ತುಮಕೂರು
## ಪ್ರಕಟಣೆ
### ಸಂಖ್ಯೆ: ಬಿಸಿಎಂ2/ಕಾ.ತ./ಸಿಆರ್27/09–10, ದಿನಾಂಕ:17ನೇ ಜುಲೈ, 2009

**ವಿಷಯ:** 2009–10ನೇ ಸಾಲಿನ ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ತರಬೇತಿ ನೀಡುವ ಬಗ್ಗೆ.

ತುಮಕೂರು ಜಿಲ್ಲೆಯ ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ 2009–10ನೇ ಸಾಲಿನಲ್ಲಿ ವಕೀಲ ವೃತ್ತಿಯಲ್ಲಿ ತರಬೇತಿ ನೀಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಹಿಂದುಳಿದ ವರ್ಗಗಳಿಗೆ ಸೇರಿದ ಕಾನೂನು ಪದವೀಧರರು ಈ ಕೆಳಕಂಡ ನಿಬಂಧನೆಗೆ ಒಳಪಟ್ಟು ಅರ್ಜಿ ಸಲ್ಲಿಸಬಹುದು. ಅರ್ಜಿಯನ್ನು ತುಮಕೂರು ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು. ಅವಶ್ಯಕ ದಾಖಲಾತಿಗಳೊಂದಿಗೆ ಭರ್ತಿ ಮಾಡಿದ ಅರ್ಜಿಗಳನ್ನು ದಿನಾಂಕ:25.08.2009ರೊಳಗಾಗಿ ಅಥವಾ ಕರ್ನಾಟಕ ಗೆಜೆಟ್‌ಗಾಗಿ ಪ್ರಕಟಣೆಗೊಂಡ ದಿನಾಂಕದಿಂದ 30 ದಿನಗಳೊಳಗಡೆ ಸಲ್ಲಿಸಬಹುದು.

**ನಿಬಂಧನೆಗಳು:**

1) ಎಲ್.ಎಲ್.ಬಿ. ಪರೀಕ್ಷೆಯನ್ನು ಪಾಸು ಮಾಡಿದ ಹಿಂದುಳಿದ ವರ್ಗಗಳ ಅಭ್ಯರ್ಥಿಯಾಗಿರಬೇಕು. ವಕೀಲ ವೃತ್ತಿ ಅಭ್ಯಾಸಕ್ಕೆ (ಪ್ರಾಕ್ಟೀಸ್) ನಿಗದಿಪಡಿಸಿರುವ ಅರ್ಹತೆ ಹೊಂದಿರಬೇಕು. ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಎರಡು ವರ್ಷಗಳ ಅವಧಿಯೊಳಗೆ ಕಾನೂನು ಪದವಿಯ ಪರೀಕ್ಷೆಯನ್ನು ಪಾಸು ಮಾಡಿರುವ ಅಭ್ಯರ್ಥಿಗಳು ಮಾತ್ರ ತರಬೇತಿಗೆ ಅರ್ಜಿ ಸಲ್ಲಿಸಲು ಅರ್ಹತೆ ಹೊಂದಿರುತ್ತಾರೆ.

2) ಸರ್ಕಾರಿ ಆದೇಶ ಸಂಖ್ಯೆ: ಸಕಇ 225 ಬಿಸಿಎ 2000 ದಿನಾಂಕ:30.02.2002ರಲ್ಲಿ ವರ್ಗೀಕರಣ ಮಾಡಿರುವ ಪ್ರಕಾರ ವರ್ಗ–1, 2ಎ, 3ಎ ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳಾಗಿರಬೇಕು. ಸರ್ಕಾರದ ಆದೇಶ ಸಂಖ್ಯೆ: ಸಕಇ 222 ಬಿಸಿಎ 4 ದಿನಾಂಕ:20.09.2004ರ ಆದೇಶದಲ್ಲಿ ಸರ್ಕಾರವು ನಿಗದಿಪಡಿಸಿರುವ ನಮೂನೆಗಳಲ್ಲಿ ಜಾತಿ ಪ್ರಮಾಣ ಪತ್ರವನ್ನು ಸಲ್ಲಿಸಬೇಕು. ಪ್ರವರ್ಗ–1ರ ಅಭ್ಯರ್ಥಿಗಳನ್ನು ಹೊರತುಪಡಿಸಿ ಇತರೆ ಹಿಂದುಳಿದ ವರ್ಗಗಳ ಅಭ್ಯರ್ಥಿಗಳ ವಾರ್ಷಿಕ ಆದಾಯದ ಮಿತಿ ಎಲ್ಲಾ ಮೂಲಗಳಿಂದ ರೂ.15000/–ಗಳನ್ನು ಮೀರಬಾರದು.

3) ತರಬೇತಿಗೆ ಆಯ್ಕೆ ಮಾಡುವ ಅಭ್ಯರ್ಥಿಗಳ ಸಂಖ್ಯೆ ಆಗಾಗ್ಗೆ ಸರ್ಕಾರದಿಂದ ನಿಗದಿಪಡಿಸಿದಂತೆ ಮಾರ್ಪಾಡಾಗುತ್ತದೆ.

4) ತರಬೇತಿ ಅವಧಿ 4 ವರ್ಷಗಳಾಗಿದ್ದು ತರಬೇತಿಯ ಅವಧಿಯಲ್ಲಿ ತರಬೇತಿದಾರರಿಗೆ ಮಾಹೆಯಾನ ರೂ.1000/– ದಂತೆ ತರಬೇತಿ ಭತ್ಯೆ ನೀಡಲಾಗುವುದು.

5) ಈ ಸೌಲಭ್ಯ ಪಡೆಯಲಿಚ್ಛಿಸುವ ಅಭ್ಯರ್ಥಿಯ ವಯೋಮಿತಿ 30 ವರ್ಷಕ್ಕೆ ಮೀರಿರಬಾರದು, ವರ್ಗ–1ರ ಅಭ್ಯರ್ಥಿಗಳಿಗೆ ವಯೋಮಿತಿ 31 ವರ್ಷ ಮೀರಿರಬಾರದು.

6) ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.

7) ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಜಾತಿ ಆದಾಯ ಪ್ರಮಾಣ ಪತ್ರ ನೀಡಿ ಆಯ್ಕೆಯಾಗಿರುವುದು ಕಂಡು ಬಂದಲ್ಲಿ ಶಿಕ್ಷೆಗೆ ಗುರಿಪಡಿಸಿ ಸ್ಟೈಫಂಡ್ ನೀಡಿರುವ ಒಟ್ಟು ಹಣದ ಜೊತೆಗೆ ಶೇ.10 ಬಡ್ಡಿ ಸೇರಿಸಿ ಭೂಕಂದಾಯ ಬಾಕಿ ರೂಪದಲ್ಲಿ ವಸೂಲಿ ಮಾಡಲಾಗುವುದು.

8) ಸದಸ್ಯ ಕಾರ್ಯದರ್ಶಿಯವರು ಸ್ವೀಕರಿಸಿದ ಅರ್ಜಿಗಳನ್ನು ಪರಿಶೀಲನೆ ಮಾಡಿ ಅಪೂರ್ಣ ಮಾಹಿತಿ ಹೊಂದಿರುವ ಹಾಗೂ ಕೇಳಿರುವ ಮಾಹಿತಿಯನ್ನು ಅರ್ಜಿ ಸಂಗಡ ಒದಗಿಸದ ಮತ್ತು ಅವಧಿ ಮೀರಿದಂತಹ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸಲಾಗುವುದು.

ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ
ಮತ್ತು ಅಲ್ಪಸಂಖ್ಯಾತರ ಇಲಾಖೆ, ತುಮಕೂರು.

## ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ತುಮಕೂರು
## ಪ್ರಕಟಣೆ
### ಸಂಖ್ಯೆ: ಬಿಸಿಎಂ2/ಮ.ಅ.ಕಾ.ತ/ಸಿಆರ್28/09–10, ದಿನಾಂಕ:17ನೇ ಜುಲೈ, 2009

**ವಿಷಯ:** 2009–10ನೇ ಸಾಲಿನ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ತರಬೇತಿ ನೀಡುವ ಬಗ್ಗೆ.

ತುಮಕೂರು ಜಿಲ್ಲೆಯ ಮತೀಯ ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ 2009–10ನೇ ಸಾಲಿನಲ್ಲಿ ವಕೀಲ ವೃತ್ತಿಯಲ್ಲಿ ತರಬೇತಿ ನೀಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಮತೀಯ ಅಲ್ಪಸಂಖ್ಯಾತ ವರ್ಗಗಳಿಗೆ ಸೇರಿದ ಮುಸ್ಲಿಂ, ಕ್ರಿಶ್ಚಿಯನ್, ಬೌದ್ಧ, ಜೈನ್ ಹಾಗೂ ಪಾರ್ಸಿ ಜನಾಂಗಕ್ಕೆ ಸೇರಿದ ಕಾನೂನು ಪದವೀಧರರು ಈ ಕೆಳಕಂಡ ನಿಬಂಧನೆಗೆ ಒಳಪಟ್ಟು ಅರ್ಜಿ ಸಲ್ಲಿಸಬಹುದು. ಅರ್ಜಿಯನ್ನು ತುಮಕೂರು ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು. ಅವಶ್ಯಕ ದಾಖಲಾತಿಗಳೊಂದಿಗೆ ಭರ್ತಿ

ಮಾಡಿದ ಅರ್ಜಿಗಳನ್ನು ದಿನಾಂಕ:25.08.2009ರೊಳಗಾಗಿ ಅಥವಾ ಕರ್ನಾಟಕ ಗೆಜೆಟ್‌ಗಾಗಿ ಪ್ರಕಟಣೆಗೊಂಡ ದಿನಾಂಕದಿಂದ 30 ದಿನಗಳೊಳಗಡೆ ಸಲ್ಲಿಸಬಹುದು.

**ನಿಬಂಧನೆಗಳು:**

1) ಎಲ್.ಎಲ್.ಬಿ. ಪರೀಕ್ಷೆಯನ್ನು ಪಾಸು ಮಾಡಿದ ಮತೀಯ ಅಲ್ಪಸಂಖ್ಯಾತ ಅಭ್ಯರ್ಥಿಯಾಗಿರಬೇಕು. ವಕೀಲ ವೃತ್ತಿ ಅಭ್ಯಾಸಕ್ಕೆ (ಪ್ರಾಕ್ಟೀಸ್) ನಿಗದಿಪಡಿಸಿರುವ ಅರ್ಹತೆ ಹೊಂದಿರಬೇಕು. ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಎರಡು ವರ್ಷಗಳ ಅವಧಿಯೊಳಗೆ ಕಾನೂನು ಪದವಿಯ ಪರೀಕ್ಷೆಯನ್ನು ಪಾಸು ಮಾಡಿರುವ ಅಭ್ಯರ್ಥಿಗಳು ಮಾತ್ರ ತರಬೇತಿಗೆ ಅರ್ಜಿ ಸಲ್ಲಿಸಲು ಅರ್ಹತೆ ಹೊಂದಿರುತ್ತಾರೆ.

2) ಅಭ್ಯರ್ಥಿಗಳನ್ನು ಸರ್ಕಾರಿ ಆದೇಶ ಸಂಖ್ಯೆ: ಎಸ್.ಡಬ್ಲ್ಯೂಎಲ್ 68 ಎಸ್.ಇ.ಡಬ್ಲ್ಯೂ:89 ದಿನಾಂಕ:02.11.1990 ರನ್ವಯ ಆಯ್ಕೆ ಮಾಡಲಾಗುವುದು ಕಾನೂನು ತರಬೇತಿ ಪಡೆಯುವ ಅಭ್ಯರ್ಥಿಯು ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧ ಸಿಖ್ ಮತ್ತು ಪಾರ್ಸಿ ಸಮುದಾಯಗಳಿಗೆ ಸೇರಿದವರಾಗಿದ್ದು ರಾಜ್ಯದ ನಿವಾಸಿಯಾಗಿರಬೇಕು.

3) ಅಭ್ಯರ್ಥಿಯ ಕುಟುಂಬ ವಾರ್ಷಿಕ ಆದಾಯ ರೂ.15000/– ಗಳನ್ನು ಮೀರಬಾರದು ಪ್ರವರ್ಗ–1 ರಡಿಯಲ್ಲಿ ಬರುವ ಮತೀಯ ಅಲ್ಪಸಂಖ್ಯಾತ ಅಭ್ಯರ್ಥಿಗಳಿಗೆ ಆದಾಯದ ಮಿತಿ ಇರುವುದಿಲ್ಲ.

4) ತರಬೇತಿಗೆ ಆಯ್ಕೆ ಮಾಡುವ ಅಭ್ಯರ್ಥಿಗಳ ಸಂಖ್ಯೆ ಆಗಾಗ್ಗೆ ಸರ್ಕಾರದಿಂದ ನಿಗದಿಪಡಿಸಿದಂತೆ ಮಾರ್ಪಾಡಾಗುತ್ತದೆ.

5) ತರಬೇತಿ ಅವಧಿ 4 ವರ್ಷಗಳಾಗಿದ್ದು ತರಬೇತಿಯ ಅವಧಿಯಲ್ಲಿ ತರಬೇತಿದಾರರಿಗೆ ಮಾಹೆಯಾನ ರೂ.1000/– ರಂತೆ ತರಬೇತಿ ಭತ್ಯೆ ನೀಡಲಾಗುವುದು.

6) ಈ ಸೌಲಭ್ಯ ಪಡೆಯಲಿಚ್ಚಿಸುವ ಅಭ್ಯರ್ಥಿಯ ವಯೋಮಿತಿ 30 ವರ್ಷಕ್ಕೆ ಮೀರಿರಬಾರದು.

7) ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.

8) ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಜಾತಿ ಆದಾಯ ಪ್ರಮಾಣ ಪತ್ರ ನೀಡಿ ಆಯ್ಕೆಯಾಗಿರುವುದು ಕಂಡು ಬಂದಲ್ಲಿ ಶಿಕ್ಷೆಗೆ ಗುರಿಪಡಿಸಿ ಸ್ಟೈಫಂಡ್ ನೀಡಿರುವ ಒಟ್ಟು ಹಣದ ಜೊತೆಗೆ ಶೇ.10 ಬಡ್ಡಿ ಸೇರಿಸಿ ಭೂಕಂದಾಯ ಬಾಕಿ ರೂಪದಲ್ಲಿ ವಸೂಲಿ ಮಾಡಲಾಗುವುದು.

8) ಸದಸ್ಯ ಕಾರ್ಯದರ್ಶಿಯವರು ಸ್ವೀಕರಿಸಿದ ಅರ್ಜಿಗಳನ್ನು ಪರಿಶೀಲನೆ ಮಾಡಿ ಅಪೂರ್ಣ ಮಾಹಿತಿ ಹೊಂದಿರುವ ಹಾಗೂ ಕೇಳಿರುವ ಮಾಹಿತಿಯನ್ನು ಅರ್ಜಿ ಸಂಗಡ ಒದಗಿಸದ ಮತ್ತು ಅವಧಿ ಮೀರಿದಂತಹ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸಲಾಗುವುದು.

ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ
ಮತ್ತು ಅಲ್ಪಸಂಖ್ಯಾತರ ಇಲಾಖೆ, ತುಮಕೂರು.

ಪಿ.ಆರ್.675

**ಕರ್ನಾಟಕ ವಿಧಾನಸಭೆ**

**ಸಂಖ್ಯೆ: ವಿಸಸ/ಶಾರಶಾ/24/ಸಿಎ/2008–09, ದಿನಾಂಕ:14ನೇ ಜುಲೈ, 2009**

**ವಿಷಯ:** ವಿಧಾನಸಭಾ ಸದಸ್ಯರ ವಿಳಾಸದ ಬದಲಾವಣೆ.

ಬಸವನ ಬಾಗೇವಾಡಿ ವಿಧಾನಸಭಾ ಕ್ಷೇತ್ರದ ಮಾನ್ಯ ಸದಸ್ಯರಾದ ಶ್ರೀ ಎಸ್.ಕೆ.ಬೆಳ್ಳುಬ್ಬಿ ಅವರು ಕೆಳಕಂಡಂತೆ ತಮ್ಮ ವಿಳಾಸವನ್ನು ಬದಲಾಯಿಸಿರುತ್ತಾರೆ.

ಶ್ರೀ ಎಸ್.ಕೆ. ಬೆಳ್ಳುಬ್ಬಿ, ವಿಧಾನಸಭಾ ಸದಸ್ಯರು, ನಂ.5, ಪ್ಲೋರೆನ್ಸ್ ಸ್ಕೂಲ್, ನಾಗಶೆಟ್ಟಿಹಳ್ಳಿ, ಬೆಂಗಳೂರು.

ಆದಕಾರಣ, ಮಾನ್ಯ ಸದಸ್ಯರಿಗೆ ಇನ್ನು ಮುಂದೆ ಕಳುಹಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಮೇಲ್ಕಂಡ ವಿಳಾಸಕ್ಕೆ ಕಳುಹಿಸಿಕೊಡಬೇಕೆಂದು ಕೋರಲು ನಿರ್ದೇಶಿತನಾಗಿದ್ದೇನೆ.

**ಕೆ.ಸಿ. ಗೋಪಿಕೃಷ್ಣ**
ಅಧೀನ ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ.

ಪಿ.ಆರ್.659

**ಕರ್ನಾಟಕ ವಿಧಾನಸಭೆ**

**ಸಂಖ್ಯೆ: ವಿಸಸ/ಶಾರಶಾ/24/ಸಿಎ/2008–09, ದಿನಾಂಕ:14ನೇ ಜುಲೈ, 2009**

**ವಿಷಯ:** ವಿಧಾನಸಭಾ ಸದಸ್ಯರ ವಿಳಾಸದ ಬದಲಾವಣೆ.

ಹೊನ್ನಾಳಿ ವಿಧಾನಸಭಾ ಕ್ಷೇತ್ರದ ಮಾನ್ಯ ಸದಸ್ಯರಾದ ಶ್ರೀ ಎಂ.ಪಿ. ರೇಣುಕಾಚಾರ್ಯ ಅವರು ಕೆಳಕಂಡಂತೆ ತಮ್ಮ ವಿಳಾಸವನ್ನು ಬದಲಾಯಿಸಿರುತ್ತಾರೆ.

ಶ್ರೀ ಎಂ.ಪಿ. ರೇಣುಕಾಚಾರ್ಯ, ವಿಧಾನಸಭಾ ಸದಸ್ಯರು, ನಂ.36, 2ನೇ ಮುಖ್ಯರಸ್ತೆ, 3ನೇ ಅಡ್ಡರಸ್ತೆ, ಪ್ಯಾಲೇಸ್ ಕ್ರಾಸ್ ರಸ್ತೆ, ಚಕ್ರವರ್ತಿ ಲೇಔಟ್, ವಸಂತನಗರ, ಬೆಂಗಳೂರು–560 020.

ಆದಕಾರಣ, ಮಾನ್ಯ ಸದಸ್ಯರಿಗೆ ಇನ್ನು ಮುಂದೆ ಕಳುಹಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಮೇಲ್ಕಂಡ ವಿಳಾಸಕ್ಕೆ ಕಳುಹಿಸಿಕೊಡಬೇಕೆಂದು ಕೋರಲು ನಿರ್ದೇಶಿತನಾಗಿದ್ದೇನೆ.

**ಕೆ.ಸಿ. ಗೋಪಿಕೃಷ್ಣ**

ಪಿ.ಆರ್.660 ಅಧೀನ ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ.

## ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಸಿಐ 755 ಎಸ್‌ಪಿಕ್ಯೂ 2007, ಬೆಂಗಳೂರು, ದಿನಾಂಕ:17ನೇ ಜುಲೈ, 2009**

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 4ರ ಮೇರೆಗೆ**

ಮೈಸೂರು ಜಿಲ್ಲೆ, ನಂಜನಗೂಡು ತಾಲ್ಲೂಕು, ಚಿಕ್ಕಯ್ಯನಛತ್ರ ಹೋಬಳಿ, ಅಡಕನಹಳ್ಳಿ, ತಾಂಡವಪುರ ಮತ್ತು ಇಮ್ಮಾವು ಗ್ರಾಮಗಳ ಕೆಲವು ಸರ್ವೆ ನಂಬರ್‌ಗಳಲ್ಲಿನ ಜಮೀನನ್ನು ಕೈಗಾರಿಕಾ ಪ್ರದೇಶಾಭಿವೃದ್ಧಿಗಾಗಿ ಭೂಸ್ವಾಧೀನ ಪಡಿಸಿಕೊಳ್ಳಲು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಕಲಂ 1(3) 3(1) ಮತ್ತು 28(1) ರಂತೆ ಅಧಿಸೂಚನೆ ಸಂಖ್ಯೆ: ಸಿಐ 64 ಎಸ್‌ಪಿಕ್ಯೂ 2006, ದಿನಾಂಕ:31.10.2006ರನ್ವಯ ಸರ್ಕಾರದಿಂದ ಪ್ರಾಥಮಿಕ ಅಧಿಸೂಚನೆಯನ್ನು ಹೊರಡಿಸಲಾಗಿದೆ. ಸದರಿ ಅಧಿಸೂಚನೆಗಳು ದಿನಾಂಕ:31.10.2006ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿದೆ.

ತಾಂಡವಪುರ ಗ್ರಾಮದ ಈ ಕೆಳಕಂಡ ಸರ್ವೆ ನಂಬರ್‌ಗಳಲ್ಲಿನ ಜಮೀನು ಸರ್ಕಾರಕ್ಕೆ ಅವಶ್ಯಕತೆ ಇಲ್ಲದ ಕಾರಣ (ಕೆ.ಎಸ್.ಐ.ಐ.ಡಿ.ಸಿ. ಸಂಸ್ಥೆ ಈ ಜಮೀನುಗಳನ್ನು ಭೂಸ್ವಾಧೀನದಿಂದ ಕೈಬಿಡುವಂತೆ ಕೋರಿರುವ ಮೇರೆಗೆ) ಸದರಿ ಜಮೀನುಗಳನ್ನು ಭೂಸ್ವಾಧೀನ ಕ್ರಮದಿಂದ ಕೈಬಿಡಲು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಕಲಂ 4ರನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕಲಂ 1(3) 3(1) ಮತ್ತು 28(1)ರ ಅಧಿಸೂಚನೆಯಿಂದ ಸದರಿ ವಿಸ್ತೀರ್ಣದ ಜಮೀನನ್ನು ಭೂಸ್ವಾಧೀನ ಪ್ರಕ್ರಿಯೆಯಿಂದ ಕೈಬಿಡಲಾಗಿದೆ.

ಗ್ರಾಮ: ತಾಂಡವಪುರ ಹೋಬಳಿ: ಚಿಕ್ಕಯ್ಯನಛತ್ರ

ತಾಲ್ಲೂಕು: ನಂಜನಗೂಡು ಜಿಲ್ಲೆ: ಮೈಸೂರು

| ಕ್ರ. ಸಂ. | ಸರ್ವೆ ನಂಬರ್ | ವಿಸ್ತೀರ್ಣ ಎ-ಗುಂ. |
|---|---|---|
| 1. | 477 | 1-06 |
| 2. | 483 | 2-34 |
| | **ಒಟ್ಟು** | **4-00** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಂ. ವೀರಯ್ಯ**

ಪಿ.ಆರ್.663 ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಸಿಐ 160 ಎಸ್‌ಪಿಕ್ಯೂ 2008, ಬೆಂಗಳೂರು, ದಿನಾಂಕ:17ನೇ ಜುಲೈ, 2009**

**1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ವಿಧಿ 4ರ ಮೇರೆಗೆ**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966 (ಕರ್ನಾಟಕ ಕಾಯ್ದೆ 18:1966)ರ ಕಲಂ 28ರ ಉಪ ಕಲಂ 1 ನೇದ್ದರ ಕೆಳಗೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐ 551 ಎಸ್‌ಪಿಕ್ಯೂ 2007 ದಿನಾಂಕ:11.07.2007ರಂದು ಕರ್ನಾಟಕ ರಾಜ್ಯಪತ್ರದ ಪುಟ ಸಂಖ್ಯೆ: 1 ರಿಂದ 18ರವರೆಗಿನ ಭಾಗ-3ರಲ್ಲಿ ದಿನಾಂಕ:12.07.2007ರಂದು ಪ್ರಕಟಗೊಂಡ ಈ ಕೆಳಗಿನ ಅನುಸೂಚಿಯಲ್ಲಿ ಕಾಣಿಸಿರುವ ಜಮೀನುಗಳು ಹಾಗೂ ಅವುಗಳ ಕ್ಷೇತ್ರವನ್ನು ಅಂಕಣ 4 ರಿಂದ 7ರವರೆಗೆ ವಿವರಿಸಿದ ಪರಿಮಿತಿಯೊಂದಿಗೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966ರ ಕಲಂ 4ರನ್ವಯ ವಿಹಿತವಾಗಿರುವ ಅಧಿಕಾರದ ಮೇರೆಗೆ (ವಿಮಾನಯಾನ ಪ್ರಾಧಿಕಾರದವರು ಅಲೈನ್‌ಮೆಂಟ್ ಬದಲಾವಣೆ ಮಾಡಿರುವ ಕಾರಣ ಸದರಿ ಜಮೀನುಗಳು ಬಿಜಾಪುರ ವಿಮಾನ ನಿಲ್ದಾಣ ನಿರ್ಮಿಸಲು ಅಗತ್ಯವಿಲ್ಲವೆಂದು ಅಭಿಪ್ರಾಯ ಪಟ್ಟಿರುವ ಕಾರಣ) ಕೈಗಾರಿಕಾ ಪ್ರದೇಶದಿಂದ ಕೈಬಿಡಲಾಗಿದೆ ಅಂತಾ ಕರ್ನಾಟಕ ಸರ್ಕಾರವು ಈ ಮೂಲಕ ಘೋಷಿಸಿರುತ್ತದೆ.

**ಅನುಸೂಚಿ**

ಗ್ರಾಮ: ಅಲಿಯಾಬಾದ, ಬುರಾಣಾಪೂರ ಹಾಗೂ ಮಧುಬಾವಿ, ತಾಲ್ಲೂಕು: ಬಿಜಾಪುರ ಜಿಲ್ಲೆ: ಬಿಜಾಪುರ

| ಅ. ನಂ. | ರಿ.ಸ.ನಂ. | ಕ್ಷೇತ್ರ ಎ–ಗುಂ–ಅ | ಚಕ್‌ಬಂದಿ (ಚತು:ಸೀಮೆ) 28(1)ರ ಅಧಿಸೂಚನೆ ಪ್ರಕಾರ | | | |
|---|---|---|---|---|---|---|
| | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| **ಗ್ರಾಮ: ಅಲಿಯಾಬಾದ** | | | | | | |
| – | – | – | – | – | – | – |
| **ಗ್ರಾಮ: ಬುರಾಣಾಪೂರ** | | | | | | |
| 1. | 23 | 25–10 | ಮಧುಬಾವಿ ಗ್ರಾಮದ ಗಡಿ ಮತ್ತು 24 | 18, 19, 20 | 21–22 | 23ರ ಉಳಿದ ಭಾಗ |
| **ಗ್ರಾಮ: ಮಧುಬಾವಿ** | | | | | | |
| 1. | 8:ಅ2 | 2–30 | 31 | 8ಅ1ರ ಉಳಿದ ಭಾಗ | 8ಅ1 | 8ಅ2ರ ಉಳಿದ ಭಾಗ |
| 2. | 13 | 1–10 | 8 | 12 | 14 | 13ರ ಉಳಿದ ಭಾಗ |
| 3. | 16 | 2–39 | 15:3 | ಬುರಾಣಾಪೂರ ಗ್ರಾಮದ ಗಡಿ | 16:2ರ ಉಳಿದ ಭಾಗ | 12 |
| 4. | 31:3 | 2–34 | 30 | 8ಅ1 | 31 | 31 |
| | 32:2 | 2–09 | 32:3 | 32:1 | 30 | 32:2ರ ಉಳಿದ ಭಾಗ |
| | 33ರ ಪೈ | 0–25 | 66 | 32 | 34 | 33ರ ಉಳಿದ ಭಾಗ |
| | 48 | 21–18 | 48ರ ಉಳಿದ ಭಾಗ | 51 | 49:1 | 48ರ ಉಳಿದ ಭಾಗ |
| | **ಒಟ್ಟು** | **34–05** | | | | |

**ಘೋಷ್ವಾರೆ**

| ಕ್ರ. ಸಂ. | ಗ್ರಾಮದ ಹೆಸರು | ಕ್ಷೇತ್ರ ಎ–ಗುಂ. |
|---|---|---|
| 1. | ಅಲಿಯಾಬಾದ | –– |
| 2. | ಬುರಾಣಾಪೂರ | 25–10 |
| 3. | ಮಧುಬಾವಿ | 34–05 |
| | **ಒಟ್ಟು** | **59–15** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಂ. ವೀರಯ್ಯ**

ಪಿ.ಆರ್.664

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**KARNATAKA PUBLIC SERVICE COMMISSION**

**Office of the Public Service Commission, "Udyoga Soudha", Bangalore**

**NOTIFICATION**

**No.Adm.973/2009-10/PSC, Bangalore, Dated:10th July, 2009**

In pursuance of Regulation 13(a) of the Karnataka Public Service Commission (Conditions of Service) Regulations 1957, Sri H.B. Channaraju, Deputy Secretary, Karnataka Public Service Commission, (Group 'A' Senior Scale) in grade Rs.20025-28275 is promoted with immediate effect as

"Joint Secretary", Karnataka Public Service Commission (Group 'A' Selection-Time-Scale) in grade Rs.24450-31800, on officiating basis, in the existing vacancy.

By Order of the Commission,

**V.B. PATIL**

PR-665

Secretary,

Karnataka Public Service Commission.

**KARNATAKA PUBLIC SERVICE COMMISSION**

**Office of the Public Service Commission, "Udyoga Soudha", Bangalore**

**NOTIFICATION**

**No.Adm.972/2009-10/PSC, Bangalore, Dated:10th July, 2009**

In pursuance of Regulation 13(a) of the Karnataka Public Service Commission (Conditions of Service) Regulations 1957, read with Rule 2(3) of the Karnataka Civil Service (Regulation of Promotion, Pay and Pension) Rules, 1978, Sri K. Anil Kumar, Deputy Secretary (Retd.), Karnataka Public Service Commission, who was placed in independent charge of the post of Joint Secretary, Karnataka Public Service Commission, (Group 'A' Selection-Time-Scale) in the pay scale of Rs.24450-31800 w.e.f. 26.06.2007 in accordance with Rule 32 of the Karnataka Civil Service Rules vide Notification No.Adm:620/2007-08/PSC, Dated:25.06.2007 is accorded retrospective officiating promotion to the said post from the date he was placed in independent charge.

By Order of the Commission,

**V.B. PATIL**

PR-666

Secretary,

Karnataka Public Service Commission.

**ವಾಣಿಜ್ಯ ತೆರಿಗೆ ಅಧಿಕಾರಿಯವರ ಕಛೇರಿ, (ವಸೂಲಿ) ಗುಲ್ಬರ್ಗಾ**

**ಸಂಖ್ಯೆ:ವಾತೆಅ(ಮ)/09–10/53, ದಿನಾಂಕ:17ನೇ ಜುಲೈ, 2009**

ಕೇಂದ್ರ ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್ 4(1)(ಎ) ಅಡಿಯಲ್ಲಿ ನಮೂದಾಗಿರುವ ವಾಣಿಜ್ಯ ತೆರಿಗೆ ಅಧಿಕಾರಿ (ವಸೂಲಿ) ಗುಲಬರ್ಗಾ ಕಛೇರಿಗೆ ಸಂಬಂಧಪಟ್ಟ ಈ ಕೆಳ ಕಾಣಿಸಿದ ವಿಷಯಗಳ ಸಂಪೂರ್ಣ ಮಾಹಿತಿಯನ್ನು ವಿವರಿಸಲಾಗಿದೆ.

ಈ ಕಛೇರಿಯಲ್ಲಿ ಈ ಕೆಳಕಂಡ ವಹಿಯನ್ನು ಮತ್ತು ಕಡತಗಳನ್ನು ನಿರ್ವಹಿಸಲಾಗುತ್ತಿದೆ.

| | | |
|---|---|---|
| 1. | 'ಎ' ವಹಿ | ವರ್ತಕರ ನೊಂದಣಿ ವಿವರಗಳು |
| 2. | 'ಡಿ' ವಹಿ | ಬೇಡಿಕೆ ವಹಿ |
| 3. | 'ಇ' ವಹಿ | ನೋಟಿಸು ವಹಿ |
| 4. | 'ಜಿ1' ವಹಿ | ದೈನಂದಿನ ಸಂಗ್ರಹಣೆಯ ವಹಿ |
| 5. | 'ಜಿ2' ವಹಿ | ಬೇಡಿಕೆ ಸಂಗ್ರಹಣೆ ಮತ್ತು ಬಾಕಿ ವಹಿ |
| 6. | 'ಹೆಚ್' ವಹಿ | ದೈನಂದಿನ ನಗದು ಸಂಗ್ರಹಣೆ ವಹಿ |
| 7. | 'ಐ' ವಹಿ | ವಸೂಲಿ ವಹಿ |
| 8. | 'ಕೆ' ವಹಿ | ಅಪರಾಧಗಳ ವಹಿ |
| 9. | 'ಎಮ್' ವಹಿ | ಧನಾದೇಶ ಸಂಗ್ರಹಣೆ ವಹಿ |
| 10. | 'ಪಿ' ವಹಿ | ಖಜಾನೆಗೆ ನಗದು ಪಾವತಿ ವಹಿ |
| 11. | 'ಕ್ಯೂ' ವಹಿ | ಮರುಪಾವತಿ ವಹಿ |
| 12. | 'ಆರ್' ವಹಿ | ಗುಪ್ತವಾರ್ತೆ ವರದಿ ವಹಿ |
| 13. | 'ಜೆ' ವಹಿ | ಮೇಲ್ಮನವಿಯ ವಹಿ |
| 14. | | ಶಾಸನ ಬದ್ಧ ವಹಿಗಳು |
| 15. | | ಚಿತ್ರಮಂದಿರಗಳ ಸೀಲಿಂಗ್ ವಹಿ |

ಈ ಕಛೇರಿಯ ಕ್ಷೇತ್ರ ವ್ಯಾಪ್ತಿಗೆ ಬರುವ ನೊಂದಣಿ ಕಡತ ಹಾಗೂ ವರ್ತಕರ ತೆರಿಗೆ ಬಾಕಿ ಇರುವ ಪಟ್ಟಿಯನ್ನು ಮತ್ತು ಚಿತ್ರಮಂದಿರದ ವಾರದ ನಮೂನೆಯ ವಿವರಗಳು ಗಣಕಿಕೃತಗೊಳಿಸಲಾಗಿದೆ.

**ಶ್ರೀಮತಿ ಪಾಟೀಲ ಶಿವಲಿಂಗಮ್ಮ**
ವಾಣಿಜ್ಯ ತೆರಿಗೆ ಅಧಿಕಾರಿ,
(ವಸೂಲಿ) ಗುಲ್ಬರ್ಗಾ.

ಪಿ.ಆರ್.674

## GOVERNMENT OF KARNATAKA

## DIRECTORATE OF ECONOMICS AND STATISTICS, BANGALORE-1

### Consumer Price Index Numbers For Industrial Workers

No. DES 08 PWX 2009 Month: May, 2009

State: Karnataka Base: 1987-88=100 Date :17-07-2009

| Group/Sub-Group | | Bellary | Bhadra-vathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| 1 | | 2 | 3 | 4 | 5 | 6 | 7 | 8 | 9 | 10 | 11 | 12 |
| I. | **FOOD:** (a) Cereals & Products | 587 | 668 | 641 | 545 | 462 | 549 | 555 | 620 | 472 | 591 | 620 |
| | (b) Pulses & Products | 484 | 536 | 556 | 620 | 500 | 506 | 494 | 540 | 502 | 516 | 479 |
| | (c) Oil & Fats | 299 | 288 | 267 | 289 | 309 | 270 | 314 | 290 | 266 | 267 | 279 |
| | (d) Meat, Fish & Eggs | 606 | 563 | 567 | 489 | 591 | 555 | 457 | 565 | 764 | 682 | 523 |
| | (e) Milk & Products | 385 | 348 | 409 | 390 | 407 | 420 | 371 | 431 | 356 | 433 | 360 |
| | (f) Condiments & Spices | 378 | 408 | 546 | 528 | 338 | 355 | 396 | 387 | 410 | 476 | 421 |
| | (g) Vegetables & Fruits | 444 | 383 | 493 | 567 | 349 | 445 | 462 | 386 | 391 | 376 | 485 |
| | (h) Other Food | 420 | 522 | 457 | 501 | 446 | 403 | 405 | 378 | 371 | 464 | 463 |
| | **FOOD GROUP INDEX** | **485** | **518** | **531** | **502** | **431** | **456** | **459** | **510** | **466** | **509** | **489** |
| II. | Pan, Supari, Tobacco & Intoxicants | 443 | 512 | 525 | 382 | 367 | 536 | 506 | 355 | 296 | 487 | 475 |
| III. | Fuel & Light | 337 | 367 | 401 | 509 | 463 | 386 | 364 | 380 | 335 | 620 | 319 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 275 | 268 | 234 | 390 | 334 | 257 | 428 | 472 | 242 | 547 | 233 |
| VI. | **MISCELLANEOUS:** (a) Medical Care | 663 | 794 | 385 | 427 | 253 | 253 | 450 | 424 | 321 | 427 | 242 |
| | (b) Education, Recreation & Amusement | 410 | 444 | 803 | 265 | 441 | 491 | 362 | 353 | 622 | 515 | 543 |

| 1 | | 2 | 3 | 4 | 5 | 6 | 7 | 8 | 9 | 10 | 11 | 12 |
|---|---|---|---|---|---|---|---|---|---|---|---|---|
| | (c) Transport & Communication | 416 | 485 | 405 | 397 | 598 | 524 | 453 | 567 | 464 | 393 | 434 |
| | (d) Personal Care & effects | 309 | 322 | 335 | 335 | 336 | 290 | 334 | 321 | 363 | 305 | 301 |
| | (e) Others | 394 | 394 | 375 | 534 | 366 | 297 | 320 | 272 | 287 | 428 | 278 |
| | Miscellaneous Group | 431 | 431 | 447 | 397 | 379 | 343 | 369 | 332 | 400 | 402 | 341 |
| | **GENERAL INDEX** | **404** | **419** | **430** | **431** | **369** | **369** | **396** | **414** | **388** | **458** | **356** |
| | To convert to Base 1960 Multiply by Linking Factor. | **7.39** | **9.19** | **8.27** | **...** | **8.26** | **8.56** | **9.25** | **7.92** | **9.31** | **...** | **...** |

For Director.

**Government of India,**
**Ministry of Labour and Employment**
**Labour Bureau**

**CONSUMER PRICE INDEX NUMBERS OF INDUSTRIAL WORKERS ON BASE-2001=100**

State: Karnataka Month/Year: May, 2009

| Group/Sub-Groups | Bangalore | Belgaum | Hubli-Dharwar | Mercara | Mysore |
|---|---|---|---|---|---|
| **1** | **2** | **3** | **4** | **5** | **6** |
| **Food Sub Group** | | | | | |
| (a) Cereals & Products | 195 | 176 | 182 | 168 | 189 |
| (b) Pulses & Products | 175 | 186 | 195 | 170 | 164 |
| (c) Oils & Fats | 165 | 168 | 175 | 160 | 148 |
| (d) Meat, Fish & Eggs | 190 | 200 | 202 | 173 | 193 |
| (e) Milk & Milk Products | 147 | 139 | 119 | 142 | 151 |
| (f) Condiments & Spices | 154 | 156 | 150 | 139 | 165 |
| (g) Vegetables & Fruits | 169 | 185 | 172 | 144 | 167 |
| (h) Other Food | 180 | 166 | 156 | 173 | 170 |
| **I. FOOD GROUP** | 177 | 171 | 169 | 163 | 172 |
| II-Pan, Supari, Tobacco & Intoxicants | 162 | 144 | 142 | 126 | 152 |
| III-Fuel & Light Group | 127 | 140 | 139 | 106 | 147 |
| IV-Housing Group | 163 | 131 | 153 | 109 | 146 |
| V-Clothing, Bedding & Footwear | 112 | 121 | 127 | 123 | 123 |
| **Miscellaneous Sub Group:** | | | | | |
| (a) Medical Care | 163 | 160 | 147 | 158 | 143 |
| (b) Education, Recreation & Amusement | 141 | 146 | 154 | 146 | 119 |
| (c) Transport & Communication | 199 | 185 | 180 | 160 | 163 |
| (d) Personal Care & effects | 143 | 142 | 142 | 139 | 143 |
| (e) Others Miscellaneous Items | 175 | 161 | 143 | 177 | 174 |
| VI. Miscellaneous Group | 166 | 158 | 154 | 151 | 144 |
| **CENTRE INDEX** | **164** | **158** | **158** | **146** | **157** |

**HARITA SABHARWAL**
PR-676 DEPUTY DIRECTOR.

## ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ
## ಅಧಿಸೂಚನೆ
### ಸಂಖ್ಯೆ: ಸಿಐ 379 ಎಸ್‌ಪಿಕ್ಯೂ 2008, ಬೆಂಗಳೂರು, ದಿನಾಂಕ:21ನೇ ಜುಲೈ, 2009
### 1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ಕಲಂ 4ರ ಮೇರೆಗೆ

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ (1966 ಕರ್ನಾಟಕ ಕಾಯ್ದೆ 18, 1966)ರ ಕಲಂ 1(3) ಹಾಗೂ 3(1)ರ ಮೇರೆಗೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐ 275 ಎಸ್‌ಪಿಕ್ಯೂ 2007, ಬೆಂಗಳೂರು ದಿನಾಂಕ:21.04.2007 ರಾಜ್ಯಪತ್ರದಲ್ಲಿ ಪ್ರಕಟಣೆ ದಿನಾಂಕ:21.04.2007 ಮತ್ತು ಕಲಂ 28(1)ರ ಅಧಿಸೂಚನೆ ಸಂಖ್ಯೆ: ಸಿಐ 275 ಎಸ್‌ಪಿಕ್ಯೂ 2007, ಬೆಂಗಳೂರು ದಿನಾಂಕ:21.04.2007 ರಾಜ್ಯ ಪತ್ರ ಪ್ರಕಟಣೆ ದಿನಾಂಕ:21.04.2007ರಂದು ಪ್ರಕಟವಾಗಿದ್ದು, ಈ ಕೆಳಗಿನ ಅನುಸೂಚಿಯಲ್ಲಿ ಕಾಣಿಸಿರುವ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ತಾಲ್ಲೂಕು, ಸೋಗಾನೆ ಗ್ರಾಮದ ಅಂಕಣ 3ರಲ್ಲಿ ಕಾಣಿಸಿರುವ ಜಮೀನಿನಲ್ಲಿ ಹೊಂದಿಕೊಂಡಂತೆ ಅಂಕಣ 4ರಲ್ಲಿರುವ ವಿಸ್ತೀರ್ಣ ಹಾಗೂ ಅಂಕಣ 5ರಲ್ಲಿ ಕಾಣಿಸಿಕೊಂಡಿರುವ ಚಕ್ಕುಬಂದಿಗಳನ್ನು ಒಳಗೊಂಡ ಪ್ರದೇಶಗಳನ್ನು (ವಿಮಾನ ಪ್ರಾಧಿಕಾರದವರು ಮತ್ತು ಎ.ಡಿ.ಎಫ್.ಆರ್. ರವರು ಸರ್ವೆ ಮಾಡಿದಾಗ ಈ ಜಮೀನುಗಳನ್ನು ಅಂತಿಮವಾಗಿ ಭೂಸ್ವಾಧೀನಪಡಿಸಲು ಗುರುತಿಸದ ಕಾರಣ) ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966 ಕಲಂ 4ರನ್ವಯ ವಿಹಿತವಾಗಿರುವ ಅಧಿಕಾರದ ಮೇರೆಗೆ ಕೈಗಾರಿಕಾ ಪ್ರದೇಶದಿಂದ ಕೈಬಿಡಲಾಗಿದೆ.

ಗ್ರಾಮ: ಸೋಗಾನೆ ಹೋಬಳಿ: ನಿಧಿಗೆ

ತಾಲ್ಲೂಕು: ಶಿವಮೊಗ್ಗ ಜಿಲ್ಲೆ: ಶಿವಮೊಗ್ಗ

| ಕ್ರ. ಸಂ. | ಗ್ರಾಮದ ಹೆಸರು | ಸರ್ವೆ ನಂಬರ್ | ವಿಸ್ತೀರ್ಣ ಎ–ಗುಂ | ಗಡಿಗಳು | | | |
|---|---|---|---|---|---|---|---|
| | | | | ಉತ್ತರ | ಪೂರ್ವ | ದಕ್ಷಿಣ | ಪಶ್ಚಿಮ |
| 1. | ಸೋಗಾನೆ | 111 | 4–02 | 111 (ಅಂಶ) | ದಾರಿ | 120 | 120 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಂ. ವೀರಯ್ಯ**

ಪಿ.ಆರ್.677

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ
## ಅಧಿಸೂಚನೆ
### ಸಂಖ್ಯೆ: ಸಿಐ 210 ಎಸ್‌ಪಿಕ್ಯೂ 2007, ಬೆಂಗಳೂರು, ದಿನಾಂಕ:24ನೇ ಜುಲೈ, 2009
### 1966ರ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ ಕಲಂ 4ರ ಮೇರೆಗೆ

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆಯ (1966 ಕರ್ನಾಟಕ ಕಾಯ್ದೆ 18, 1966)ರ ಕಲಂ 1(3) ಹಾಗೂ 3(1)ರ ಮೇರೆಗೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐ 75 ಎಸ್‌ಪಿಕ್ಯೂ 2004, ಬೆಂಗಳೂರು ದಿನಾಂಕ:20.03.2004 ರಾಜ್ಯಪತ್ರದಲ್ಲಿ ಪ್ರಕಟಣೆ ದಿನಾಂಕ:20.03.2004 ಮತ್ತು ಕಲಂ 28(1)ರ ಅಧಿಸೂಚನೆ ಸಂಖ್ಯೆ: ಸಿಐ 75 ಎಸ್‌ಪಿಕ್ಯೂ 2004, ರಾಜ್ಯ ಪತ್ರದಲ್ಲಿ ದಿನಾಂಕ:20.03.2004ರಂದು ಪ್ರಕಟವಾಗಿದ್ದು, ಈ ಕೆಳಗಿನ ಅನುಸೂಚಿಯಲ್ಲಿ ಕಾಣಿಸಿರುವ ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ನಗದೀಯತ್ ಕಾವಲ್ ಗ್ರಾಮದ ಅಂಕಣ 3ರಲ್ಲಿ ಕಾಣಿಸಿರುವ ಜಮೀನಿನಲ್ಲಿ ಹೊಂದಿಕೊಂಡಂತೆ ಅಂಕಣ 4ರಲ್ಲಿರುವ ವಿಸ್ತೀರ್ಣ ಹಾಗೂ ಅಂಕಣ 5ರಲ್ಲಿ ಕಾಣಿಸಿಕೊಂಡಿರುವ ಚಕ್ಕುಬಂದಿಗಳನ್ನು ಒಳಗೊಂಡ ಪ್ರದೇಶಗಳನ್ನು (ಕಂಪನಿಯು ಭೂಸ್ವಾಧೀನ ಪ್ರಕ್ರಿಯೆಯಿಂದ ಹಿಂದಕ್ಕೆ ಸರಿದ ಕಾರಣ ಹಾಗೂ ಯಾವುದೇ ಉದ್ದಿಮೆದಾರರು ಕೈಗಾರಿಕೆ ಸ್ಥಾಪಿಸಲು ಆಸಕ್ತಿ ತೋರಿಸದೇ ಇರುವ ಕಾರಣ) ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಕಾಯ್ದೆ 1966 ಕಲಂ 4ರನ್ವಯ ವಿಹಿತವಾಗಿರುವ ಅಧಿಕಾರದ ಮೇರೆಗೆ ಕೈಗಾರಿಕಾ ಪ್ರದೇಶದಿಂದ ಕೈಬಿಡಲಾಗಿದೆ.

ಗ್ರಾಮ: ನಗದೀಯತ್ ಕಾವಲ್ ಹೋಬಳಿ: ಕಸಬಾ

ತಾಲ್ಲೂಕು: ಕಡೂರು ಜಿಲ್ಲೆ: ಚಿಕ್ಕಮಗಳೂರು

| ಕ್ರ. ಸಂ. | ಗ್ರಾಮದ ಹೆಸರು | ಸರ್ವೆ ನಂಬರ್ | ವಿಸ್ತೀರ್ಣ ಎ–ಸೆಂ | ಚಕ್ಕುಬಂದಿ | | | |
|---|---|---|---|---|---|---|---|
| | | | | ಉತ್ತರ | ಪೂರ್ವ | ದಕ್ಷಿಣ | ಪಶ್ಚಿಮ |
| 1. | ನಗದೀಯತ್ ಕಾವಲ್ | 13 (ಅಂಶ) | 6–00 | 14 | 17 | ಕಾರೇಹಳ್ಳಿ ಗಡಿ | ಇದೇ ಸ.ಡಿ. ಉಳಿಕೆ |

| ಕ್ರ. ಸಂ. | ಗ್ರಾಮದ ಹೆಸರು | ಸರ್ವೆ ನಂಬರ್ | ವಿಸ್ತೀರ್ಣ ಎ–ಸೆಂ | ಚಕ್ಕುಬಂದಿ | | | |
|---|---|---|---|---|---|---|---|
| | | | | ಉತ್ತರ | ಪೂರ್ವ | ದಕ್ಷಿಣ | ಪಶ್ಚಿಮ |
| 2. | ನಗದೀಯತ್ ಕಾವಲ್ | 17 (ಅಂಶ) | 14–00 | ಇದೇ ಸ.ಡಿ. ಉಳಿಕೆ | ಇದೇ ಸ.ಡಿ. ಉಳಿಕೆ | ಕಾರೇಹಳ್ಳಿ ಗಡಿ | 13 |
| | **ಒಟ್ಟು** | | **20–00** | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಂ. ವೀರಯ್ಯ**

ಪಿ.ಆರ್.679 ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003

**Sub:** KVAT Act, 2003-Clarification under Section 59(4) regarding the rate of tax applicable on (1) bentonite for use as sand (for use as cat litter) and (2) dog chews (snacks for dogs and cats)-reg.

**Ref:** Application Dated:04.02.2009 of Sri Md. Shafiulla Shariff, Proprietor, Fine Furniture, #2, Meenakshi Koil Street, (Near Shivajinagar Bus Stand), Bangalore-560 051.

In the application cited above Sri Md. Shafiulla Shariff, Proprietor, Fine Furniture, #2, Meenakshi Koil Street, (Near Shivajinagar Bus Stand), Bangalore-560 051, has sought the rate of tax applicable on (1) bentonite sand (for use as cat litter) and (2) dog chews (snacks for dogs and cats).

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.264/08-09, Dated:4th July, 2009**

It is hereby clarified that rates of tax applicable on the following goods are as under.

| Sl. No. | Commodity | Rate of tax/ Section |
|---|---|---|
| 1. | Bentonite Sand (for use as cat litter) | 12.5% under Section 4(1) (b) of the KVAT Act, 2003. |
| 2. | Dog Chews (snacks for dogs and cats) | 12.5% under Section 4(1) (b) of the KVAT Act, 2003. |

**B.A. HARISH GOWDA**

PR-680 Commissioner of Commercial Taxes (Karnataka), Bangalore.

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003

**Sub:** KVAT Act, 2003-Clarification under Section 59(4) regarding the rate of tax applicable on 'execution of works contract of erection/ installation of electric generator sets supplied by customers'-reg.

**Ref:** Application Dated:25.05.2009 of Sri P. Prakash, Partner, Empower, No.33/12, 1st floor, Victoria Road, 1st Cross, Xavier Layout, Bangalore-560 047.

In the application cited above Sri P. Prakash, Partner, Empower, No.33/12, 1st floor, Victoria Road, 1st Cross, Xavier Layout, Bangalore-560 047, has sought clarification regarding the rate of tax applicable on 'execution of works contract of erection installation of electric generator sets supplied by customers'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.35/09-10, Dated:1st July, 2009**

It is hereby clarified that 'the taxable turnover relating to transfer of property in goods involved in the execution of works contract of supply of electric cable, pipes and earthing wires connected with installation of generator sets supplied by customer's is liable to tax at 12.5% under entry 23 of the Sixth Schedule read with Section 4(1)(c) of the KVAT Act, 2003.

**B.A. HARISH GOWDA**

PR-681 Commissioner of Commercial Taxes (Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on 'MP4(MPEG4) Player'-reg.

**Ref:** Application Dated:16.06.2009 of Sony India Pvt Ltd., # 768, 100ft Road, HAL IInd Stage, 12th Main, Indiranagar, Bangalore-560 038.

In the application cited above Sony India Pvt Ltd., # 768, 100ft Road, HAL IInd Stage, 12th Main, Indiranagar, Bangalore-560 038, has sought clarification regarding the rate of tax applicable on 'MP4(MPEG4) Player'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.21/09-10, Dated:10th July, 2009**

It is hereby clarified that 'MP4 (MPEG4) Player' is taxable at 12.5% under Section 4(1) of the KVAT Act, 2003.

**PRADEEP SINGH KHAROLA**

PR-682 Commissioner of Commercial Taxes (Karnataka), Bangalore.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/582/ಡಿಟಿಸಿಆರ್/1999–2000, ದಿನಾಂಕ:30ನೇ ಮೇ, 2009**

ಉಪಸ್ಥಿತರು: ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಅಬಕಾರಿ ನಿರೀಕ್ಷಕರು,
ಬಂಟ್ವಾಳ ವಲಯ, ಬಂಟ್ವಾಳ.

**ಆರೋಪಿ:**

ಸಂಕಪ್ಪ ಪೂಜಾರಿ, ಬಿನ್: ಲೋಕಯ್ಯ ಪೂಜಾರಿ, ಬೋಳಂಗಡಿ ಮನೆ, ಬಂಟ್ವಾಳ ತಾಲ್ಲೂಕು.

**ವಾಹನ ಮಾಲೀಕರು:**

ಸಂಕಪ್ಪ ಪೂಜಾರಿ, ಬಿನ್: ಲೋಕಯ್ಯ ಪೂಜಾರಿ, ಬೊಳಂಗಡಿ ಮನೆ, ಬಂಟ್ವಾಳ ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:13–6–2000 ರಂದು ಫಿರ್ಯಾದುದಾರರು ಮತ್ತು ಸಿಬ್ಬಂದಿಯವರು ಕೂಡಿಕೊಂಡು ಪಾಣೆಮಂಗಳೂರು ಕಲ್ಲಡ್ಕ ರಸ್ತೆ ಅಕ್ಕರಂಗಡಿ ಕಾಡು ಪ್ರದೇಶದಲ್ಲಿ ಅಕ್ರಮವಾಗಿ ಸಾರಾಯಿ ವ್ಯಾಪಾರ ನಡೆಸುತ್ತಿರುತ್ತಾರೆ ಎಂಬ ಮಾಹಿತಿ ಮೇರೆಗೆ ಸದರಿ ಸ್ಥಳಕ್ಕೆ ದಾಳಿ ನಡೆಸಿದಾಗ, ಒಬ್ಬ ಆಸಾಮಿಯು ಆಟೋರಿಕ್ಷಾ ನೋಂದಣಿ ಸಂಖ್ಯೆ: ಸಿಆರ್‌ಎಕ್ಸ್–9518 ವನ್ನು ಚಲಾಯಿಸಿಕೊಂಡು ಬಂದು, ಸಮವಸ್ತ್ರದಲ್ಲಿದ್ದ ಸಿಬ್ಬಂದಿಯವರನ್ನು ಕಂಡ ಕೂಡಲೇ ರಿಕ್ಷಾವನ್ನು ಅನುಮಾನದಿಂದ ಚಲಾಯಿಸುತ್ತ, ನಂತರ ರಿಕ್ಷಾವನ್ನು ಬಿಟ್ಟು ಓಡಲು ಪ್ರಯತ್ನಿಸಿದಾಗ, ಅನುಮಾನಗೊಂಡ ಸಿಬ್ಬಂದಿಯವರು ಆತನನ್ನು ಹಿಡಿದು ರಿಕ್ಷಾದ ಎದುರಿನ ಸೀಟನ್ನು ಪರಿಶೀಲಿಸಿದಾಗ, ಅದರಲ್ಲಿ ಘಾಟು ವಾಸನೆಯಿಂದ ಕೂಡಿದ ಸಾರಾಯಿ ಇದ್ದುದು ಕಂಡು ಬಂತು. ರಿಕ್ಷಾದ ಹಿಂದಿನ ಸೀಟಿನಲ್ಲಿ ಪರಿಶೀಲಿಸಿದಾಗ, ಅದರಲ್ಲಿ ಒಂದು ಗೋಣಿ ಚೀಲವಿದ್ದು, ಅದರಲ್ಲಿ 100 ಎಂ.ಎಲ್.ನ 120 ಸಾರಾಯಿ ಸ್ಯಾಚೆಟ್‌ಗಳು ಇದ್ದು, ಅವುಗಳ ಮೇಲೆ ಕೆಂಪು ಬಣ್ಣದ ಬರಹದಲ್ಲಿ ಕರ್ನಾಟಕ ಸರಕಾರ ಎಂಬ ಲೇಬಲ್ ಇದ್ದು, 100 ಎಂ.ಎಲ್.ನ 35 ಡಿಗ್ರಿ ಯು.ಪಿ. ಅಬಕಾರಿ ಭದ್ರತಾ ಉಗ್ರಾಣದಲ್ಲಿ ತಯಾರಿಸಿದೆ. ಮೈಶುಗರ್ ಕಂಪೆನಿ ಲಿಮಿಟೆಡ್ ಮಂಗಳೂರು, ಮದ್ಯಪಾನ ಆರೋಗ್ಯಕ್ಕೆ ಹಾನಿಕರ, ಲೈಸನ್ಸು ನಂ:ಇಸಿಇ/5/ಎಜಿಜಿ/99 ದಿ:30–6–1999 ಎಂದು ಮುದ್ರಿಸಿರುವುದು ಕಂಡು ಬಂತು. ನಂತರ ಚಾಲಕ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ, ಆತನು ಸಂಕಪ್ಪ ಪೂಜಾರಿ, ಬಿನ್: ಲೋಕಯ್ಯ ಪೂಜಾರಿ, ಬೊಳಂಗಡಿ ಮನೆ ಮತ್ತು ಗ್ರಾಮ, ಬಂಟ್ವಾಳ ಎಂದು ಆಟೋರಿಕ್ಷಾವು ತನ್ನದಾಗಿದ್ದು, ತಾನು ಸಾರಾಯಿ ಅಂಗಡಿಯಲ್ಲಿ ನೌಕರನಾಗಿ ಕೆಲಸ ಮಾಡುತ್ತಿದ್ದೇನೆ ಎಂದು ತಿಳಿಸಿದನು. ಸಾರಾಯಿ ಸಾಗಾಟ ಮಾಡಲು ರಹದಾರಿ ಪತ್ರ ಹಾಗೂ ದಾಖಲಾತಿಗಳು ಇದೆಯೇ ಎಂದು ವಿಚಾರಿಸಿದಾಗ, ತನ್ನ ಬಳಿ ಅದು ಯಾವುದೂ ಇಲ್ಲವೆಂದು ತಿಳಿಸಿರುವ ಮೇರೆಗೆ ಸದರಿ ಸಾರಾಯಿ ಸ್ಯಾಚೆಟ್‌ಗಳನ್ನು ಇಲಾಖಾ ವಶಕ್ಕೆ ತೆಗೆದುಕೊಂಡು, ಸಾರಾಯಿ ಸ್ಯಾಚೆಟ್‌ಗಳಿಂದ 100 ಎಂ.ಎಲ್.ನ 2 ಸಾರಾಯಿ ಸ್ಯಾಚೆಟ್‌ಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಮಾದರಿಗಾಗಿ ತೆಗೆದು ಇಲಾಖಾ ಸೀಲ್‌ನಿಂದ ಸೀಲ್ ಮಾಡಿ, ಇದು ಅಕ್ರಮ ಸಾರಾಯಿ ಸಾಗಾಣಿಕೆಯಾಗಿರುವುದರಿಂದ, ಕರ್ನಾಟಕ ಅಬಕಾರಿ ಕಾಯಿದೆ 1965 ರ ಸೆಕ್ಷನ್ 11 ಮತ್ತು 14 ಹಾಗೂ ಕಲಂ 34, 38ಎ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಆರೋಪಿಯ ವಿರುದ್ಧ ತಕ್ಷೀರು ಸಂಖ್ಯೆ: 2/99–00 ದಿ:13–6–2000 ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು, ಅಕ್ರಮ ಸಾಗಾಣಿಕೆಗೆ ಬಳಸಿದ ಆಟೋರಿಕ್ಷಾ ಸಂಖ್ಯೆ: ಸಿಆರ್‌ಎಕ್ಸ್–9518 ನ್ನು ಮತ್ತು ಸಾರಾಯಿ ಸ್ಯಾಚೆಟ್‌ಗಳನ್ನು ಚಾಲಕನ ಸಮೇತ ದಸ್ತಗಿರಿ ಮಾಡಿ ಸ್ಥಳದಲ್ಲಿಯೇ ಪಂಚನಾಮೆ, ಮಹಜರನ್ನು ತಯಾರಿಸಿ ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ತಕ್ಷೀರಿನ ಆರೋಪಿಯಾದ ಶ್ರೀ ಸಂಕಪ್ಪ ಪೂಜಾರಿ, ಬಿನ್: ಲೋಕಯ್ಯ ಪೂಜಾರಿ, ಬೋಳಂಗಡಿ ಮನೆ, ಬಂಟ್ವಾಳ ತಾಲ್ಲೂಕು ಇವರು ತನ್ನ ವಕೀಲರ ಮುಖಾಂತರ ದಿ: 30–6–2000 ರಂದು ಈ ಪ್ರಾಧಿಕಾರಕ್ಕೆ ಮನವಿ ಸಲ್ಲಿಸಿ, ವಶಪಡಿಸಿಕೊಂಡ ಆಟೋರಿಕ್ಷಾವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ವಿನಂತಿಸಿರುತ್ತಾರೆ. ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರುರವರು ವಾಹನ ಮಾಲೀಕರ ಅರ್ಜಿಯನ್ನು ಪರಿಶೀಲಿಸಿ, ಅರ್ಜಿದಾರರು ತನ್ನ ಗಮನಕ್ಕೆ ಬಾರದೆ ನಡೆದಿದೆ ಎನ್ನುವುದಕ್ಕೆ ಈ ಹಂತದಲ್ಲಿ ಯಾವುದೇ ಸಾಕ್ಷ್ಯಾದಾರಗಳು ಇರುವುದಿಲ್ಲ. ಒಂದು ವೇಳೆ ಸದರಿ ಆಟೋರಿಕ್ಷಾವನ್ನು ಅರ್ಜಿದಾರರ ವಶಕ್ಕೆ ತಾತ್ಕಾಲಿಕ ನೆಲೆಯಲ್ಲಿ ಬಿಟ್ಟುಕೊಟ್ಟಲ್ಲಿ ಅದನ್ನು ಮುಂದೆ ಇಂತಹದೇ ಅಕ್ರಮ ಸಾಗಾಟಕ್ಕೆ ಉಪಯೋಗಿಸುವ ಸಾಧ್ಯತೆಯಿರುವುದರಿಂದ, ಅರ್ಜಿದಾರರು ಸಲ್ಲಿಸಿದ ಅರ್ಜಿಯನ್ನು ಈ ಪ್ರಾಧಿಕಾರದ ಆದೇಶ ಸಂಖ್ಯೆ:ಎಸ್‌ಡಿಕೆ/582/ಡಿಟಿಸಿಆರ್/1999–2000 ದಿ:25–7–2000 ರಂದು ತಿರಸ್ಕರಿಸಿರುತ್ತಾರೆ.

ಸದರಿ ಆದೇಶದಿಂದ ಭಾದಿತರಾದ ಅರ್ಜಿದಾರರು ದಕ್ಷಿಣ ಕನ್ನಡ ಜಿಲ್ಲಾ ಸೆಷನ್ ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲ್ ಸಂಖ್ಯೆ: 124/2000 ರಂತೆ ಮೇಲ್ಮನವಿ ಸಲ್ಲಿಸಿದ್ದು, ಇವರ ಮೇಲ್ಮನವಿಯನ್ನು ಪರಿಗಣಿಸಿದ ಒಂದನೇ ಹೆಚ್ಚುವರಿ ಸೆಷನ್ ನ್ಯಾಯಾಧೀಶರು ತಮ್ಮ ಆದೇಶ ಕ್ರಿಮಿನಲ್ ಅಪೀಲ್ ಸಂ:124/2000 ದಿ:11–8–2000 ರಲ್ಲಿ ಈ ಪ್ರಾಧಿಕಾರದ ಆದೇಶ ದಿ:25–7–2000 ವನ್ನು ತಳ್ಳಿ ಹಾಕಿ, ಅರ್ಜಿದಾರರು ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು

ಇವರಿಗೆ ತೃಪ್ತಿಕರವಾಗುವ ಹಾಗೂ ಅರ್ಜಿದಾರರು ಪ್ರಚಲಿತ ಇಂಡೆಮ್ನಿಟಿ ಬಾಂಡ್ ರೂ.50,000/– ಮತ್ತು ಸಾಲ್ವೆಂಟ್ ಶ್ಯೂರಿಟಿಯನ್ನು ಹಾಗೂ ಕೆಲವು ಷರತ್ತುಗಳಿಗೆ ಬದ್ದರಾದಲ್ಲಿ ಅಧಿಕೃತ ಅಧಿಕಾರಿಗಳು ಜಪ್ತು ಮಾಡಿರುವ ಆಟೋರಿಕ್ಷಾ ಸಂ: ಸಿಆರ್‌ಎಕ್ಸ್–9518 ನ್ನು ತಾತ್ಕಾಲಿಕ ನೆಲೆಯಲ್ಲಿ ಅರ್ಜಿದಾರರ ವಶಕ್ಕೆ ಬಿಡುಗಡೆಗೊಳಿಸಲು ಆದೇಶಿಸಿರುತ್ತಾರೆ.

ಸತ್ರ ನ್ಯಾಯಾಲಯದ ಆದೇಶದ ಪ್ರಕಾರ ಅರ್ಜಿದಾರರು ರೂ.50,000/– ಇಂಡೆಮ್ನಿಟಿ ಬಾಂಡ್‌ಗೆ ಸಮನಾಗಿ ಒಬ್ಬ ಸಾಲ್ವೆಂಟ್ ಶ್ಯೂರಿಟಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದರಿಂದ, ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ, ಬಂಟ್ವಾಳ ಇವರ ತಕ್ಷೀರು ಸಂಖ್ಯೆ:2/1999–00 ದಿ:13–6–2000 ರಲ್ಲಿ ಜಪ್ತು ಮಾಡಿರುವ ಆಟೋರಿಕ್ಷಾ ಸಂ:ಸಿಆರ್‌ಎಕ್ಸ್–9518 ನ್ನು ಅರ್ಜಿದಾರರ ಸುಪರ್ಧಿಗೆ ಈ ಪ್ರಾಧಿಕಾರ ಆದೇಶ ಸಮ ಸಂಖ್ಯೆ ದಿ:5–9–2000 ರಂದು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲಾಗಿದೆ.

ವಾಹನ ಮಾಲೀಕರಿಗೆ ಕಲಂ 43ಬಿ ಪ್ರಕಾರ ಕಾರಣ ಕೇಳಿ ನೋಟೀಸನ್ನು ನೋಂದಣಿ ಅಂಚೆ ಮೂಲಕ ದಿ:24–11–2000 ರಂದು ನೀಡಲಾಗಿದ್ದು, ಸದರಿ ನೋಟೀಸಿಗೆ ಅನುಗುಣವಾಗಿ ಅವರು ತನ್ನ ವಕೀಲರ ಮುಖಾಂತರ ದಿ:5–12–2000 ರಂದು ಉತ್ತರವನ್ನು ಸಲ್ಲಿಸಿರುತ್ತಾರೆ. ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ, ಬಂಟ್ವಾಳ ಇವರ ತನಿಖಾ ವರದಿ ಸಂಖ್ಯೆ: ಇಎಕ್ಸ್‌ಇ/ ಬಿಎನ್‌ಟಿ/ಸಿಆರ್‌ಎಂ/81/99–00 ದಿ:22–1–2001 ರ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೆಟ್‌ಗಳಿಂದ ಸ್ಯಾಂಪಲ್‌ನ್ನು ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರಿಗೆ ಕಳುಹಿಸಲಾಗಿದ್ದು, ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ಪತ್ರ ಸಂಖ್ಯೆ: ಇ–765/ 2000–01 ದಿ:5–7–2000 ರಲ್ಲಿ ಸಾರಾಯಿಯ ಮದ್ಯಸಾರ ಪ್ರಮಾಣ ಶೇ.27–10 ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಸದರಿ ಸಾರಾಯಿ ಸ್ಯಾಚೆಟ್‌ಗಳು ಉಬ್ಬಿಕೊಂಡು ಉಪಯೋಗಿಸಲು ಸಾಧ್ಯವಿಲ್ಲದ ಕಾರಣ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಅಬಕಾರಿ ನಿರೀಕ್ಷಕರ ತನಿಖಾ ವರದಿಯನ್ನು ಆಧರಿಸಿ ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು ಇವರ ಮುಟ್ಟುಗೋಲು ಆದೇಶ ಸಂಖ್ಯೆ: ಎಸ್‌ಡಿಕೆ/582/ಡಿಟಿಸಿಆರ್/1999–00 ದಿ:31–1–2001 ರಂದು ತಕ್ಷೀರಿನಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೆಟ್‌ಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಿಯಮ 43ಎ ರನ್ವಯ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರ ಸಮಕ್ಷಮ ನಾಶಪಡಿಸಲು ಆದೇಶಿಸಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಸರಕಾರದ ಅಭಿಯೋಜನೆ ಪರ ಸಾಕ್ಷಿಯನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಸರಕಾರದ ಪರ ಹಾಗೂ ವಾಹನ ಮಾಲೀಕರ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳ ಮೇಲೆ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿರುವುದು ಪರಿಶೀಲನಾ ಅಂಶಗಳು ಈ ಕೆಳಗಿನಂತಿರುತ್ತದೆ.

1) ದಿ: 13–6–2000 ರಂದು ಆಟೋರಿಕ್ಷಾ ಸಂಖ್ಯೆ: ಸಿಆರ್‌ಎಕ್ಸ್–9518 ರಲ್ಲಿ ಅಕ್ರಮ ಸಾರಾಯಿ ಸಾಗಾಟ ಮಾಡಲಾಗಿತ್ತೇ?

2) ಸದರಿ ವಾಹನದಲ್ಲಿ ಅಕ್ರಮ ಸಾರಾಯಿಯನ್ನು ತನ್ನ ತಿಳುವಳಿಕೆಗೆ ಬಾರದೆ ಮಾಡಲಾಗಿತ್ತೇ ಎಂಬುವುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3) ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷಿಗಳ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಲಾಗಿದೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದು, ಎರಡನೇ ಅಂಶವನ್ನು ಸಕರಾತ್ಮಕವಾಗಿ ಇಲ್ಲವೆಂದು ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: 1**

ಶ್ರೀ.ಹೆಚ್.ಎನ್.ಹಳಿಯಾಳ್‌ಕರ್, ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರು ಈ ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯಾಗಿದ್ದು, ಇವರು ದಿ:12–7–2007 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆಯನ್ನು ನೀಡಿರುತ್ತಾರೆ.

ತಾನು ದಿನಾಂಕ:13–6–2000 ರಂದು ದೊರೆತ ಖಚಿತ ವರ್ತಮಾನದ ಮೇರೆಗೆ ಸಿಬ್ಬಂದಿಯೊಂದಿಗೆ ಪಾಣೆಮಂಗಳೂರು ಅಕ್ಕರಹಂಗಡಿಯಲ್ಲಿ ರಸ್ತೆಗಾವಲು ಮಾಡುತ್ತಿರುವ ಸಮಯದಲ್ಲಿ ಅನುಮಾನದ ಮೇರೆಗೆ ಒಂದು ಆಟೋರಿಕ್ಷಾವನ್ನು ನಿಲ್ಲಿಸಲು ಸೂಚನೆ ನೀಡಿದಾಗ, ಚಾಲಕನು ರಿಕ್ಷಾವನ್ನು ನಿಲ್ಲಿಸಿ ಓಡಲು ಪ್ರಯತ್ನಿಸಿದಾಗ ಆತನನ್ನು ಹಿಡಿದರು. ನಂತರ ಸದ್ರಿ ರಿಕ್ಷಾವನ್ನು ತಪಾಸಣೆ ಮಾಡಲಾಗಿ, ಕಾಲು ಇಡುವ ಜಾಗದಲ್ಲಿ ಘಾಟು ವಾಸನೆ ಬರುತ್ತಿರುವ ಒಂದು ಗೋಣಿ ಚೀಲವನ್ನು ನೋಡಲಾಯಿತು. ಸದರಿ ಗೋಣಿ ಚೀಲವನ್ನು ತೆರೆದು ನೋಡಲಾಗಿ, ಅದರಲ್ಲಿ 100 ಎಂ.ಎಲ್.ನ 120 ಸಾರಾಯಿ ಸ್ಯಾಚೆಟ್‌ಗಳು ಕಂಡು ಬಂತು. ಸದರಿ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಿಸಲು ಅವಶ್ಯ ರಹದಾರಿ ಪತ್ರ ಇದೆಯೇ ಎಂದು ವಿಚಾರಿಸಿದಾಗ ಆತನಲ್ಲಿ ಇಲ್ಲ ಎಂದು ತಿಳಿಸಿದನು. ನಂತರ ಆತನ ಹೆಸರು ಕೇಳಲಾಗಿ ಸಂಕಪ್ಪ, ಬಿನ್: ಲೋಕಯ್ಯ ಪೂಜಾರಿ, ಬೊಳದಂಗಡಿ ಮನೆ, ಬಂಟ್ವಾಳ ತಾಲ್ಲೂಕು ಎಂದು ತಿಳಿಸಿದನು. ನಂತರ ಸದರಿ ಸಾರಾಯಿ ಸ್ಯಾಚೆಟ್‌ಗಳಿಂದ 2 ಸಾರಾಯಿ ಸ್ಯಾಚೆಟ್‌ಗಳನ್ನು ಪ್ರತ್ಯೇಕಿಸಿ ಮಾದರಿ ತಯಾರಿಸಿದೆವು. ಅವುಗಳಿಗೆ ಬಟ್ಟೆ ಸುತ್ತಿ ಇಲಾಖಾ ಸೀಲ್‌ನ್ನು ಮುದ್ರಿಸಿದೆವು ಹಾಗೂ ಉಳಿದ ಸಾರಾಯಿ ಸ್ಯಾಚೆಟ್‌ಗಳ ಗೋಣಿ ಚೀಲಗಳಿಗೆ ಸೀಲ್ ಮಾಡಲಾಯಿತು. ನಂತರ ಸಾರಾಯಿ ಸ್ಯಾಚೆಟ್‌ಗಳನ್ನು ಹಾಗೂ ಸಾಗಾಣಿಕೆಗೆ ಬಳಸಿದ ಆಟೋರಿಕ್ಷಾವನ್ನು ಮತ್ತು ಚಾಲಕನನ್ನು ವಶಕ್ಕೆ

ತೆಗೆದುಕೊಂಡು ಮಹಜರನ್ನು, ಮಾದರಿ ಸೀಲನ್ನು ಮತ್ತು ಸೊತ್ತುಗಳ ಪಟ್ಟಿಯನ್ನು ಸ್ಥಳದಲ್ಲಿಯೇ ತಯಾರಿಸಿದೆವು. ಮಹಜರಿನ ಮೂಲ ಪ್ರತಿಯು ಮಾನ್ಯ ನ್ಯಾಯಾಲಯದಲ್ಲಿದ್ದು, ಅದರ ಛಾಯ ಪ್ರತಿಯನ್ನು ಗುರುತಿಸಿ ನಿಶಾನೆ ಪಿ–1 ಎಂದು, ಮಾದರಿ ಸೀಲನ್ನು ನಿಶಾನೆ ಪಿ–2 ಎಂದು, ಸೊತ್ತುಗಳ ಪಟ್ಟಿಯನ್ನು ನಿಶಾನೆ ಪಿ–3 ಎಂದು ಗುರುತಿಸಲಾಯಿತು. ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ–4 ಎಂದು ಗುರುತಿಸಲಾಯಿತು. ಪ್ರಕರಣದಲ್ಲಿ ವಶಪಡಿಸಿಕೊಂಡ ಸೊತ್ತುಗಳು ಕರ್ನಾಟಕ ಅಬಕಾರಿ ಕಾನೂನಿನಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದಂತಹ ಸೊತ್ತುಗಳಾಗಿರುವುದರಿಂದ, ಈ ಬಗ್ಗೆ ತನಿಖಾ ವರದಿಯನ್ನು ತಯಾರಿಸಿ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು ಇವರಿಗೆ ಸಲ್ಲಿಸಿರುತ್ತೇನೆ. ಸದರಿ ವರದಿಯನ್ನು ನಿಶಾನೆ ಪಿ–5 ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ.

ಪಾಟೀ ಸವಾಲಿಗೆ ಉತ್ತರಿಸುತ್ತಾ, ದೊರೆತ ಖಚಿತ ಮಾಹಿತಿಯನ್ನು ದಿನಚರಿಯಲ್ಲಿ ನಮೂದಿಸಿರುತ್ತೇನೆ. ಸದರಿ ಗೋಣಿ ಚೀಲವನ್ನು ರಿಕ್ಷಾದ ಹಿಂದಿನ ಸೀಟಿನ ಕಾಲು ಇಡುವ ಸ್ಥಳದಲ್ಲಿ ಇಡಲಾಗಿತ್ತು. ರಿಕ್ಷಾವು ಸಾರ್ವಜನಿಕರನ್ನು ಬಾಡಿಗೆಗಾಗಿ ಸಾಗಾಟ ಮಾಡುವ ರಿಕ್ಷಾ ಎಂದರೆ ಸರಿ. ಗೋಣಿ ಚೀಲದಲ್ಲಿ ದನಗಳ ಆಹಾರ ಇದೆ ಎಂದರೆ ಸರಿಯಲ್ಲ. ರಿಕ್ಷಾ ಚಾಲಕನ ವಿರುದ್ಧ ಸುಳ್ಳು ಮೊಕದ್ದಮೆ ದಾಖಲಿಸಿರುತ್ತೇನೆ ಎಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

ಆರ್.ಸಿ.ಮಾಲೀಕರಾದ ಶ್ರೀ.ಸಂಕಪ್ಪ ಪೂಜಾರಿ ಇವರು ದಿ:27–5–2009 ರಂದು ಈ ಪ್ರಾಧಿಕಾರದ ಮುಂದೆ ವಿಚಾರಣೆಗೆ ಹಾಜರಾಗಿ, ತಾನು ವೈಯಕ್ತಿಕ ಕೌಟುಂಬಿಕ ಸಮಸ್ಯೆಗಳಿಂದಾಗಿ ಪ್ರಾಧಿಕಾರದ ಮುಂದೆ ಹೆಚ್ಚು ಆಸಕ್ತಿ ವಹಿಸಲು ಸಾಧ್ಯವಾಗದೇ ಇರುವ ಕಾರಣ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆ ಪಡೆದಿರುವ ಆಟೋರಿಕ್ಷಾವನ್ನು ದಿ:7–1–2009 ರಂದು ಅಬಕಾರಿ ಉಪ ನಿರೀಕ್ಷಕರು (2), ಬಂಟ್ವಾಳ ವಲಯ, ಬಂಟ್ವಾಳ ಇವರ ವಶಕ್ಕೆ ಹಿಂತಿರುಗಿಸಿರುತ್ತೇನೆ ಎಂದು ಪ್ರಾಧಿಕಾರದ ವಿಚಾರಣೆ ಸಂದರ್ಭದಲ್ಲಿ ಹೇಳಿಕೆ ನೀಡಿರುತ್ತಾರೆ. ಈ ಕುರಿತು ದಿ:27–1–2009 ರ ಅಬಕಾರಿ ಉಪ ನಿರೀಕ್ಷಕರು (2), ಬಂಟ್ವಾಳ ವಲಯ, ಬಂಟ್ವಾಳ ಇವರ ವರದಿಯಂತೆ ಸದ್ರಿ ಆಟೋರಿಕ್ಷಾವನ್ನು ಅವರ ಕಚೇರಿಗೆ ಒಪ್ಪಿಸಿರುವ ಬಗ್ಗೆ ವರದಿ ಮಾಡಿರುವುದು ಕಂಡು ಬರುತ್ತದೆ ಹಾಗೂ ವಾಹನ ಮಾಲೀಕರು ಸದರಿ ಮಧ್ಯಂತರ ಬಿಡುಗಡೆ ಹೊಂದಿದ ಆಟೋರಿಕ್ಷಾವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತನ್ನಿಂದ ಯಾವುದೇ ತಕರಾರು ಇರುವುದಿಲ್ಲ ಮತ್ತು ಪ್ರಕರಣದ ವಿಚಾರಣೆಯನ್ನು ಕೈಬಿಡಲು ಹಾಗೂ ಮುಕ್ತಾಯಗೊಳಿಸಬೇಕೆಂದು ಈ ಬಗ್ಗೆ ಹೇಳಿಕೆಯನ್ನು ನೀಡಿರುತ್ತಾರೆ.

ಅರ್ಜಿದಾರರ ಹಾಗೂ ಸಹಾಯಕ ಅಭಿಯೋಜಕ ನಿರ್ದೇಶಕರ ವಾದ ವಿವಾದವನ್ನು ಪರಿಗಣಿಸಿ ಪ್ರಕರಣದ ದಾಖಲೆಗಳನ್ನು ಆಧರಿಸಿ,ತನಿಖಾ ವರದಿ ಹಾಗೂ ಪ್ರಕರಣದ ಪುರಾವೆಗಳಿಂದ ಈ ಪ್ರಕರಣದಲ್ಲಿ ಜಪ್ತುಗೊಳಿಸಿರುವ ವಾಹನದಲ್ಲಿ ದಿ:13–6–2000 ರಂದು ಅಕ್ರಮವಾಗಿ ಸಾರಾಯಿ ಸಾಗಾಣಿಕೆ ಮಾಡಲಾಗಿರುವುದು ಪತ್ತೆಯಾಗಿರುವುದರಿಂದ, ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 11, 14 ರಂತೆ ಅಪರಾಧವಾಗಿದ್ದು, ಕಲಂ 34, 38ಎ ರೀತ್ಯಾ ಶಿಕ್ಷಾರ್ಹವಾಗಿರುವುದರಿಂದ, ಸದರಿ ವಾಹನವನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಲಾಗಿರುವುದು ಸಾಬೀತಾಗಿರುವುದರಿಂದ, ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 43ಎ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ. ಮೇಲಿನ ಸಾಕ್ಷ್ಯಾಧಾರಗಳು ಮತ್ತು ಸಾಕ್ಷಿ ವಿಚಾರಣೆಗಳಿಂದಾಗಿ ಆರ್.ಸಿ. ಮಾಲೀಕರು ತನ್ನ ವಾಹನದಲ್ಲಿ ಅಕ್ರಮವಾಗಿ ಸಾರಾಯಿಯನ್ನು ಸಾಗಿಸುತ್ತಿದ್ದುದು ಪತ್ತೆಯಾಗಿರುವುದರಿಂದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತೀರ್ಮಾನಿಸಿ ಈ ಆದೇಶ.

**ಆದೇಶ ಸಂಖ್ಯೆ: ಎಸ್‌ಡಿಕೆ/582/ಡಿಟಿಸಿಆರ್/1999–2000, ದಿನಾಂಕ:30ನೇ ಮೇ, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43 (ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಾಲಂ 43 ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ, ಬಂಟ್ವಾಳ ಇವರ ತಕ್ಷೀರು ಸಂಖ್ಯೆ: 2/1999–00 ದಿ:13–6–2000 ರಲ್ಲಿ ಜಪ್ತುಪಡಿಸಿರುವ ವಾಹನ ಆಟೋರಿಕ್ಷಾ ಸಂಖ್ಯೆ: ಸಿಆರ್‌ಎಕ್ಸ್–9518 ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ: 30–05–2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾ.ಸಾ.–1: ಶ್ರೀ.ಹೆಚ್.ಎನ್.ಹಳಿಯಾಳ್‌ಕರ್, ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ.

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1 : ಮಹಜರಿನ ಪ್ರತಿ

ನಿಶಾನೆ ಪಿ–2 : ಮಾದರಿ ಸೀಲ್‌ನ ಪ್ರತಿ.

ನಿಶಾನೆ ಪಿ–3 : ಸೊತ್ತುಗಳ ಪಟ್ಟಿ

ನಿಶಾನೆ ಪಿ–4 : ಪ್ರಥಮ ಮಾಹಿತಿ ವರದಿ

ನಿಶಾನೆ ಪಿ–5 : ಅಧಿಕೃತ ಅಧಿಕಾರಿಯವರಿಗೆ ಸಲ್ಲಿಸಿದ ವರದಿ

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆ ಮಾಡಿದ ಸಾಕ್ಷಿದಾರರು:–

ಪಿಡಬ್ಲ್ಯೂ–1: ಶ್ರೀ ಸಂಕಪ್ಪ ಪೂಜಾರಿ (ವಾಹನ ಮಾಲೀಕರು)

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್.622

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/306/ಡಿಟಿಸಿಆರ್/2005–2006, ದಿನಾಂಕ:20ನೇ ಜೂನ್, 2009**

ಉಪಸ್ಥಿತರು: ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ.

**ಆರೋಪಿ:**

ಆರೋಪಿಗಳು ಪರಾರಿಯಾಗಿರುತ್ತಾರೆ.

**ವಾಹನ ಮಾಲೀಕರು:**

ಶ್ರೀಮತಿ.ಲಕ್ಷ್ಮಿ (71 ವರ್ಷ)
ಕೋಂ: ದಿ.ಜಾಯಿರ ಯಾನೆ ಅಥಾರ್ ಬೆಳ್ಚಪಾಡ, ಕನ್ಯಾನ ಗ್ರಾಮ, ಬಂಟ್ವಾಳ ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:16–12–2005 ರಂದು ಪೂರ್ವಾಹ್ನ ಸುಮಾರು 9–30 ಗಂಟೆ ಸಮಯದಲ್ಲಿ ಫಿರ್ಯಾದುದಾರರು ಮತ್ತು ಸಿಬ್ಬಂದಿಯವರು ರಸ್ತೆಗಾವಲು ನಡೆಸುತ್ತಿದ್ದಾಗ ಕಲ್ಲಡ್ಕದಿಂದ ಪುತ್ತೂರು ಕಡೆಗೆ ಅತೀ ವೇಗವಾಗಿ ಜೀಪು ಬರುತ್ತಿರುವುದನ್ನು ಸಿಬ್ಬಂದಿಯವರು ಗಮನಿಸಿ, ಸದರಿ ಜೀಪನ್ನು ನಿಲ್ಲಿಸುವಂತೆ ಸೂಚನೆ ನೀಡಿದಾಗ ಜೀಪಿನ ಚಾಲಕನು ಅತೀ ವೇಗವಾಗಿ ಮುಂದಕ್ಕೆ ಚಲಾಯಿಸಿಕೊಂಡು ಹೋದಾಗ, ಕೂಡಲೇ ಸರಕಾರಿ ವಾಹನದಲ್ಲಿ ಸದರಿ ಜೀಪನ್ನು ಬೆನ್ನಟ್ಟಿ ಹಿಂಭಾಲಿಸಿದಾಗ, ಆತನು ಸುಮಾರು ಅರ್ಧ ಫರ್ಲಾಂಗು ದೂರದಲ್ಲಿ ಸದರಿ ಜೀಪನ್ನು ರಸ್ತೆ ಬದಿಯಲ್ಲಿ ನಿಲ್ಲಿಸಿ ಮರಗಳ ಮಧ್ಯೆ ಓಡಿ ಪರಾರಿಯಾದನು.

ಸದರಿ ಜೀಪನ್ನು ತಪಾಸಣೆಗೆ ಒಳಪಡಿಸಿದಾಗ ಅದರಲ್ಲಿ 35 ಲೀಟರ್ ಗಾತ್ರದ 7 ಪ್ಲಾಸ್ಟಿಕ್ ಕ್ಯಾನ್‌ಗಳಿದ್ದು, ಅದರಲ್ಲಿ ಸುಮಾರು 245 ಲೀಟರ್ ಶೇಂದಿ ಇರುವುದು ಖಚಿತವಾಯಿತು. ಈ ಬಗ್ಗೆ ಜೀಪಿನ ಶೋಧನೆ ಮಾಡಲೆಂದು ಮಾನ್ಯ ನ್ಯಾಯಾಲಯದಿಂದ ಶೋಧನಾ ವಾರಂಟ್ ಪಡೆಯಲು ಕಾಲಾವಕಾಶ ಇಲ್ಲದಿರುವುದರಿಂದ, ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 54 ರೀತ್ಯಾ ರೆಕಾರ್ಡ್ ಆಫ್ ರೀಜೆನ್ಸ್‌ನಂತೆ ವರದಿ ತಯಾರಿಸಿ ಸಿಬ್ಬಂದಿಯವರನ್ನು ಪಂಚರನ್ನಾಗಿ ಇರಿಸಿಕೊಂಡ ವಾಹನ ಸಂಖ್ಯೆ: ಕೆಎ–19–ಎಂ–5256 ಜೀಪನ್ನು ಶೋಧನೆ ಮಾಡಲಾಯಿತು. ಸದ್ರಿ ಕ್ಯಾನ್‌ಗಳಿಂದ ತಲಾ 750 ಎಂ.ಎಲ್.ನ ಬಾಟಲ್‌ಗಳಲ್ಲಿ ರಾಸಾಯನಿಕ ಪರೀಕ್ಷೆಗಾಗಿ 7 ಮಾದರಿಗಳಲ್ಲಿ ಶೇಂದಿಯನ್ನು ತೆಗೆಯಲಾಯಿತು. ದೊರೆತ ಪ್ಲಾಸ್ಟಿಕ್ ಕ್ಯಾನ್‌ಗಳಿಗೆ ಕ್ರಮವಾಗಿ 1 ರಿಂದ 7 ರವರೆಗೆ ಕ್ರಮ ಸಂಖ್ಯೆ ನೀಡಿ, ಮಾದರಿ ಬಾಟಲ್‌ಗಳಿಗೆ ಮತ್ತು ಉಳಿದ ಕ್ಯಾನ್‌ಗಳಿಗೂ ಬಟ್ಟೆದಾರ ಕಟ್ಟಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಲಾಯಿತು. ನಂತರ ಅಕ್ರಮ ಸಾಗಾಟಕ್ಕೆ ಉಪಯೋಗಿಸಿದ ಜೀಪ್ ಸಂಖ್ಯೆ: ಕೆಎ–19–ಎಂ–5256 ನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ,ಅದರ ಇಂಜಿನ್ ಸಂ: ಡಿಎಸ್51674 ಮತ್ತು ಚಾಸೀಸ್ ಸಂ: ಎಂಎಸ್‌ಡಿಎಸ್ 51674 ಆಗಿದ್ದು, ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 11, 14 ರ ಪ್ರಕಾರ ಅಪರಾಧವಾಗಿದ್ದು, ಕಲಂ 32, 34, 38ಎ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ ಅಕ್ರಮವಾಗಿ ಸಾಗಾಟ ಮಾಡಲಾಗುತ್ತಿದ್ದ ಶೇಂದಿ ಮತ್ತು

ಜೀಪನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಮಹಜರನ್ನು ಸ್ಥಳದಲ್ಲಿಯೇ ಬರೆದು, ಓಡಿ ಪರಾರಿಯಾದ ಚಾಲಕನ ವಿರುದ್ದ ತಕ್ಷೀರು ಸಂ: 5/2005–06 ದಿನಾಂಕ: 16–12–2005 ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕಳೆಂದು ಶ್ರೀಮತಿ.ಲಕ್ಷ್ಮಿ ಪ್ರಾಯ 71 ವರ್ಷ, ಕೋಂ: ದಿ.ಜಾಯಿರ ಯಾನೆ ಅಥಾರ್ ಬೆಳ್ಚಪಾಡ, ಕನ್ಯಾನ ಗ್ರಾಮ, ಬಂಟ್ವಾಳ ತಾಲೂಕು ಇವರು ತನ್ನ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿ: 10–3–2006 ರಂದು ಅರ್ಜಿ ಸಲ್ಲಿಸಿ, ತನ್ನ ಗಮನಕ್ಕೆ ಬಾರದೆ ಅಕ್ರಮವಾಗಿ ಶೇಂದಿ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಿರುವುದು, ಈ ಬಗ್ಗೆ ತನಗೆ ಯಾವುದೇ ತಿಳುವಳಿಕೆ ಇರುವುದಿಲ್ಲ. ತನ್ನ ವಾಹನವನ್ನು ತನಗೆ ಬಿಡುಗಡೆಗೊಳಿಸಬೇಕೆಂದು ಅರ್ಜಿ ಸಲ್ಲಿಸಿರುತ್ತಾರೆ. ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ದ.ಕ. ಮತ್ತು ಉಡುಪಿ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ ಮಧ್ಯಂತರ ಬಿಡುಗಡೆಗೆ ಸಲ್ಲಿಸಿದ ಅರ್ಜಿಯ ಬಗ್ಗೆ ವಿಚಾರಣೆಯನ್ನು ಕೈಗೊಂಡು, ವಾಹನದ ಅಂದಾಜು ಮೌಲ್ಯವನ್ನು ನಿರ್ಧರಿಸಲು ದೃಢೀಕರಣ ಪತ್ರ ಪಡೆಯಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದ.ಕ.ಜಿಲ್ಲೆ, ಮಂಗಳೂರು ಇವರಿಗೆ ದಿ: 6–5–2006 ಮತ್ತು ದಿ: 29–5–2006 ರಂದು ಪತ್ರ ಬರೆಯಲಾಗಿರುತ್ತದೆ.

ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರ ತನಿಖಾ ವರದಿ ಸಂ: ಸಿಆರ್ಎಂ/14/2005–06 ದಿ: 27–4–2006 ರ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ 245 ಲೀಟರ್ ಶೇಂದಿಯಲ್ಲಿ ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿಗಳನ್ನು ಕರ್ನಾಟಕ ಸರಕಾರದ ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರಿಗೆ ದಿ:28–12–2005 ರಂದು ಕಳುಹಿಸಲಾಗಿದ್ದು, ಅವರ ಪತ್ರ ಸಂಖ್ಯೆ: 652–7 ದಿ: 02–01–2006 ರ ವರದಿಯಲ್ಲಿ ಶೇಂದಿಯ ಮದ್ಯಸಾರ ಪ್ರಮಾಣ ಶೇ.04–0 ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ವಶಪಡಿಸಿಕೊಂಡ ಶೇಂದಿಯನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಹಾಗೂ ಜಪ್ತುಪಡಿಸಿಕೊಳ್ಳಲಾದ ವಾಹನದ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಯವರಿಂದ ಪಡೆಯಲಾಗಿದ್ದು, ವಾಹನದ ಮಾಲೀಕರ ಹೆಸರು ಜಾಯಿರ ಯಾನೆ ಅಥಾರ್ ಬೆಳ್ಚಪಾಡ ಎಂಬುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ.

ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ದ.ಕ.ಜಿಲ್ಲೆ, ಮತ್ತು ಉಡುಪಿ ಜಿಲ್ಲೆ, ಮಂಗಳೂರು ಇವರ ಆದೇಶ ಸಂಖ್ಯೆ: ಎಂಎನ್‌ಜಿ/ಇ.ಐ.ಬಿ/ಡಿಟಿಸಿಆರ್/305/2005–06 ದಿ:5–8–2006ರ ಆದೇಶದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಶೇಂದಿಯನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡ ಶೇಂದಿಯನ್ನು ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರ ಸಮಕ್ಷಮ ನಾಶಪಡಿಸಲು ಹಾಗೂ ಖಾಲಿ ಪ್ಲಾಸ್ಟಿಕ್ ಕ್ಯಾನ್‌ಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲು ಆದೇಶಿಸಿರುತ್ತಾರೆ.

ಶ್ರೀಮತಿ.ಲಕ್ಷ್ಮಿ ಪ್ರಾಯ 71 ವರ್ಷ, ಕೋಂ: ದಿ.ಜಾಯಿರ ಯಾನೆ ಅಥಾರ್ ಬೆಳ್ಚಪಾಡ, ಕನ್ಯಾನ ಗ್ರಾಮ, ಬಂಟ್ವಾಳ ತಾಲೂಕು ಇವರು ತನ್ನ ವಕೀಲರ ಮುಖಾಂತರ ದಿ:21–4–2006 ರಂದು ಅರ್ಜಿ ಸಲ್ಲಿಸಿ, ತನ್ನ ಗಂಡ ವಾಹನದ ನೋಂದಣಿ ಮಾಲೀಕರಾಗಿದ್ದು, ಇವರು ದಿ:5–2–2000 ರಂದು ನಿಧನರಾಗಿದ್ದು, ವಾಹನದ ಮಾಲೀಕತ್ವದ ಅಧಿಕಾರವನ್ನು ಅಫಿಧಾವಿತ್ ಮೂಲಕ ಹಾಗೂ ತಹಶೀಲ್ದಾರ್, ಬಂಟ್ವಾಳ ಇವರು ನೀಡಿದ ದೃಢಪತ್ರದ ಮೂಲಕ ವಾಹನದ ಮಾಲೀಕತ್ವವನ್ನು ಮುಂದುವರಿಸಿರುವ ಬಗ್ಗೆ ದೃಢೀಕರಣವನ್ನು ನೀಡಿರುತ್ತಾರೆ.

ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರ ಪತ್ರ ಸಂಖ್ಯೆ: ಸಿಆರ್ಎಂ/5/2005–06 ದಿ:1–9–2006 ರ ವರದಿಯಲ್ಲಿ, ವಾಹನದ ಇಂದಿನ ಮಾರುಕಟ್ಟೆ ಮೌಲ್ಯ ರೂ.20,000/– ಗಳಾಗಬಹುದೆಂದು ಮೋಟಾರು ವಾಹನ ನಿರೀಕ್ಷಕರು, ಮಂಗಳೂರು ಇವರಿಂದ ದೃಢೀಕರಣ ಪತ್ರ ಪಡೆದು ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ದ.ಕ.ಜಿಲ್ಲೆ, ಮತ್ತು ಉಡುಪಿ ಜಿಲ್ಲೆ, ಮಂಗಳೂರು ಇವರು ದಿ:25–11–2006 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದ.ಕ.ಜಿಲ್ಲೆ, ಮಂಗಳೂರು ಇವರಿಗೆ ಪತ್ರ ಬರೆಯಲಾಗಿದ್ದು, ವಾಹನಕ್ಕೆ ಸಂಬಂಧಿಸಿದಂತೆ ಮೃತರು ವಾಹನ ಮಾಲೀಕರ ಅಧಿಕೃತ ವಾರೀಸುದಾರರೆಂದು ನಿರ್ಧರಿಸುವ ವಿಷಯವು ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ಬರುವುದರಿಂದ, ಈ ಕುರಿತು ವರದಿ ಸಲ್ಲಿಸಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದ.ಕ.ಜಿಲ್ಲೆ, ಮಂಗಳೂರು ಇವರಲ್ಲಿ ಕೋರಲಾಗಿತ್ತು. ನಂತರ ಶ್ರೀಮತಿ.ಲಕ್ಷ್ಮಿಯವರ ಹೆಸರಿಗೆ ವಶಪಡಿಸಿಕೊಂಡ ಜೀಪು ಸಂಖ್ಯೆ: ಕೆಎ–19–ಎಂ–5256 ರ ಮಾಲೀಕತ್ವವನ್ನು ತನ್ನ ಗಂಡನಿಂದ ತನ್ನ ಹೆಸರಿಗೆ ದಿ:24–5–2007 ರಿಂದ ವರ್ಗಾಯಿಸಿದ ಬಗ್ಗೆ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ದಿನಾಂಕ:12–7–2007 ರಂದು ಈ ಪ್ರಾಧಿಕಾರಕ್ಕೆ ತನ್ನ ವಕೀಲರ ಮುಖಾಂತರ ಸಲ್ಲಿಸಿರುತ್ತಾರೆ.

ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ದ.ಕ.ಜಿಲ್ಲೆ, ಮತ್ತು ಉಡುಪಿ ಜಿಲ್ಲೆ, ಮಂಗಳೂರು ಇವರ ಆದೇಶ ಸಂಖ್ಯೆ:ಇ.ಐ.ಬಿ/ಡಿಟಿಸಿಆರ್/306/2005–06 ದಿ:12–7–2007 ರಲ್ಲಿ ವಾಹನ ಮಾಲೀಕರು ವಾಹನದ ಮೌಲ್ಯಕ್ಕೆ ಅನುಗುಣವಾಗಿ ರೂ.20,000/– ಬ್ಯಾಂಕ್ ಗ್ಯಾರಂಟಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಲು ಹಾಗೂ ಇತರ ಷರತ್ತುಗಳಿಗೆ ಬದ್ದರಾದಲ್ಲಿ ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲು ಆದೇಶಿಸಿರುತ್ತಾರೆ. ಈ ಬಗ್ಗೆ ಅರ್ಜಿದಾರರು ಸಿಂಡಿಕೇಟ್ ಬ್ಯಾಂಕ್, ಕನ್ಯಾನ ಶಾಖೆ, ಬಂಟ್ವಾಳ ಇವರಿಂದ ಬ್ಯಾಂಕ್ ಗ್ಯಾರಂಟಿ ಸಂಖ್ಯೆ: 2/2007 ದಿ:1–8–2007 ರಲ್ಲಿ

ರೂ.20,000/– ರ ಬ್ಯಾಂಕ್ ಭದ್ರತೆಯನ್ನು ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿ ಹಾಗೂ ಮಧ್ಯಂತರ ಬಿಡುಗಡೆ ಬಗ್ಗೆ ಪ್ರಾಧಿಕಾರ ವಿಧಿಸಿದ ಷರತ್ತುಗಳನ್ನು ಪಾಲಿಸಿರುವುದಾಗಿ ಮುಚ್ಚಳಿಕೆ ಪತ್ರ ನೀಡಿರುವುದರಿಂದ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಜೀಪು ಸಂಖ್ಯೆ: ಕೆಎ–19–ಎಂ–5256ನ್ನು ಅರ್ಜಿದಾರರ ಸುಪರ್ದಿಗೆ ತಾತ್ಕಾಲಿಕ ನೆಲೆಯಲ್ಲಿ ದಿ:10–8–2007 ರಂದು ಬಿಡುಗಡೆಗೊಳಿಸಲಾಗಿರುತ್ತದೆ.

ವಾಹನದ ನೋಂದಣಿ ಮಾಲೀಕಳಾದ ಶ್ರೀಮತಿ.ಲಕ್ಷ್ಮಿ ಪ್ರಾಯ 71 ವರ್ಷ, ಕೋಂ: ದಿ.ಜಾಯಿರ ಯಾನೆ ಅಥಾರ್ ಬೆಳ್ಚಪಾಡ, ಕನ್ಯಾನ ಗ್ರಾಮ, ಬಂಟ್ವಾಳ ತಾಲೂಕು ಇವರಿಗೆ ಕರ್ನಾಟಕ ಅಬಕಾರಿ ಕಾಯಿದೆ 1965 ರ ಸೆಕ್ಷನ್ 43ಬಿ ಪ್ರಕಾರ ಕಾರಣ ಕೇಳಿ ನೋಟೀಸನ್ನು ಈ ಪ್ರಾಧಿಕಾರದ ದಿ:2–8–07 ರಂದು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ನೋಟೀಸಿಗೆ ತನ್ನ ವಕೀಲರ ಮುಖಾಂತರ ದಿ: 18–9–2007 ರಂದು ಉತ್ತರವನ್ನು ಸಲ್ಲಿಸಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

**1) ಮೊದಲನೇ ವಿವಾದಾಂಶ:** ದಿ:16–12–2005 ರಂದು ಜೀಪು ಸಂಖ್ಯೆ: ಕೆಎ–19–ಎಂ–5256 ರಲ್ಲಿ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಅಕ್ರಮವಾಗಿ ಶೇಂದಿ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಅಪರಾಧಕ್ಕೆ ಬಳಸಲಾಗಿದೆಯೇ?

**2) ಎರಡನೇ ವಿವಾದಾಂಶ:** ಸದರಿ ವಾಹನದಲ್ಲಿ ಅಕ್ರಮವಾಗಿ ಶೇಂದಿ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

**3) ಮೂರನೇ ವಿವಾದಾಂಶ:** ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ಸಕಾರಾತ್ಮಕವಾಗಿ ಇಲ್ಲವೆಂದು ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: 1**

ಪ್ರಾಸಿಕ್ಯೂಶನ್ ಪರ ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯಾದ ಶ್ರೀ.ಅಮರನಾಥ.ಎಸ್.ಎಸ್. ಭಂಡಾರಿ, ಅಬಕಾರಿ ನಿರೀಕ್ಷಕರು ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರು ದಿ:21–06–2007 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ದಿ:16–12–2005 ರಂದು ಬೆಳಿಗ್ಗೆ 9–30 ಗಂಟೆಗೆ ಕಲ್ಲಡ್ಕ ರಾಷ್ಟ್ರೀಯ ಹೆದ್ದಾರಿಯಲ್ಲಿ ರಸ್ತೆಗಾವಲು ನಡೆಸುತ್ತಿದ್ದು, ಆ ಸಮಯಕ್ಕೆ ಕಲ್ಲಡ್ಕ ಕಡೆಯಿಂದ ಪುತ್ತೂರು ಕಡೆಗೆ ಜೀಪು ಬರುತ್ತಿದ್ದು, ಸದರಿ ಜೀಪನ್ನು ನಿಲ್ಲಿಸಲು ಸೂಚನೆ ನೀಡಿದಾಗ, ಅದನ್ನು ನಿಲ್ಲಿಸದೆ ಮುಂದಕ್ಕೆ ಚಲಾಯಿಸಿಕೊಂಡು ಹೋದನು. ತಾವು ಕೂಡಲೇ ತಮ್ಮ ಇಲಾಖಾ ವಾಹನದಲ್ಲಿ ಜೀಪನ್ನು ಬೆನ್ನಟ್ಟಿ, ಜೀಪು ಅರ್ಧ ಫರ್ಲಾಂಗು ದೂರದಲ್ಲಿ ನಿಲ್ಲಿಸಿ ಚಾಲಕನು ಓಡಿ ಪರಾರಿಯಾದನು. ಸದರಿ ಜೀಪನ್ನು ಪರಿಶೀಲಿಸಿದಾಗ, ಶೇಂದಿ ತುಂಬಿದ 35 ಲೀಟರ್ ಗಾತ್ರದ 7 ಪ್ಲಾಸ್ಟಿಕ್ ಕ್ಯಾನ್‌ಗಳಿದ್ದವು. ಯಾರೂ ಸ್ವತಂತ್ರ ಸಾಕ್ಷಿದಾರರು ದೊರಕದೇ ಇರುವುದರಿಂದ, ಇಲಾಖಾ ಸಿಬ್ಬಂದಿಯವರನ್ನೇ ಸಾಕ್ಷಿಯಾಗಿ ಶೋಧನಾ ಕಾರ್ಯವನ್ನು ಮುಂದುವರಿಸಿ, ಪ್ರತಿ ಕ್ಯಾನ್‌ಗಳಿಂದ ತಲಾ 750 ಎಂ.ಎಲ್.ನ ಒಟ್ಟು 7 ಬಾಟಲ್‌ಗಳಲ್ಲಿ ಶೇಂದಿಯನ್ನು ಪ್ರತ್ಯೇಕಿಸಿ ಮಾದರಿ ಸೀಲ್‌ನ್ನು ತಯಾರಿಸಲಾಯಿತು. ಬಾಟಲ್ ಹಾಗೂ ಕ್ಯಾನ್‌ಗಳಿಗೆ ಸೀಲ್ ಮಾಡಿ ಇಲಾಖಾ ಮುದ್ರೆಯನ್ನು ಹಾಕಿದೆವು. ಸ್ಥಳದಲ್ಲಿಯೇ ಯಾದಸ್ತನ್ನು ತಯಾರಿಸಿದೆವು. ಯಾದಸ್ತನ್ನು ನಿಶಾನೆ ಪಿ–1 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–1ಎ ಎಂದು, ಸ್ಥಳದಲ್ಲಿಯೇ ವಾಹನವನ್ನು ತಪಾಸಣೆ ಮಾಡುವ ಮೊದಲು ಯಾಯಾಲಯದಿಂದ ವಾರಂಟ್‌ನ್ನು ಪಡೆಯದೆ ಇರುವುದಕ್ಕೆ ಕಾರಣಗಳನ್ನು ನಮೂದಿಸಿ ಒಂದು ಮೆಮೊವನ್ನು ತಯಾರಿಸಿದೆವು. ಸದರಿ ಮೆಮೊವನ್ನು ನಿಶಾನೆ ಪಿ–2 ಎಂದು, ಸೊತ್ತುಗಳ ಪಟ್ಟಿಯನ್ನು ನಿಶಾನೆ ಪಿ–3 ಎಂದು ಗುರುತಿಸಲಾಯಿತು. ಸದರಿ ಸೊತ್ತುಗಳನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಕಚೇರಿಗೆ ಬಂದು ಪ್ರಥಮ ಮಾಹಿತಿ ವರದಿಯನ್ನು ದಾಖಲಿಸಿದೆವು. ಅದನ್ನು ಮಾನ್ಯ ನ್ಯಾಯಾಲಯಕ್ಕೂ ಹಾಗೂ ತನ್ನ ಮೇಲಾಧಿಕಾರಿಗಳಿಗೆ ಸಲ್ಲಿಸಿದೆನು. ಸದರಿ ದಿನಾಂಕದಂದೆ ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಎ ರಡಿಯಲ್ಲಿ ವರದಿಯನ್ನು ತಯಾರಿಸಿ ಅಬಕಾರಿ ಅಧೀಕ್ಷಕರಿಗೆ ಸಲ್ಲಿಸಿದೆನು. ಸದರಿ ವರದಿಯನ್ನು ನಿಶಾನೆ ಪಿ–4 ಎಂದು ಗುರುತಿಸಲಾಯಿತು. ದಿ:27–12–2005 ರಂದು ತನ್ನ ರಕ್ಷಕರ ಮೂಲಕ ಮಾದರಿ ಸೀಸೆಗಳನ್ನು ರಾಸಾಯನಿಕ ತಜ್ಞರಿಗೆ ಕಳುಹಿಸಿರುತ್ತೇನೆ. ಅವರಿಂದ ಪಡೆದ ವರದಿಯನ್ನು ನಿಶಾನೆ ಪಿ–5 ಎಂದು ಗುರುತಿಸಲಾಯಿತು. ನಂತರ ವಾಹನದ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಂಗಳೂರು ಇವರಿಗೆ ಪತ್ರ ಬರೆಯಲಾಗಿದ್ದು, ಅವರಿಂದ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಪಡೆದಿರುತ್ತೇನೆ. ಇದರ ಪ್ರಕಾರ ವಾಹನದ ನೋಂದಣಿ ಮಾಲೀಕ ಜಾಯಿರ ಯಾನೆ ಅಥಾರ್ ಬೆಳ್ಚಪಾಡ ಎಂಬುವುದಾಗಿ, ಈ ಬಗ್ಗೆ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತೇನೆ. ಆ ವರದಿಯನ್ನು ನಿಶಾನೆ ಪಿ–6 ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ, ತನಗೆ ಯಾವುದೇ ಖಚಿತ ವರ್ತಮಾನ ಬಂದಿರುವುದಿಲ್ಲ. ಸದರಿ ಜೀಪಿನಲ್ಲಿ ಒಬ್ಬನೇ ಇರುವುದನ್ನು ನೋಡಿದೆವು. ತಕ್ಷೀರು ನಡೆದ ಸ್ಥಳವು ಕೋಮು ಗಲಭೆ ನಡೆಯುವಂತಹ ಸೂಕ್ಷ್ಮ

ಪ್ರದೇಶವಾಗಿರುತ್ತದೆ. ಅಲ್ಲಿ ಯಾವಾಗಲೂ ಪೊಲೀಸ್ ಬಂದೋಬಸ್ತ್ ಇರುತ್ತದೆ. ವಾಹನವನ್ನು ಶೋಧನೆ ಮಾಡುವ ಸ್ಥಳದಲ್ಲಿ ಯಾವೊಬ್ಬ ಸಾರ್ವಜನಿಕರು ಬಂದಿರುವುದಿಲ್ಲ. ಸಾರ್ವಜನಿಕರನ್ನು ಪಂಚರ ಸಾಕ್ಷಿಯನ್ನಾಗಿ ಬರಬೇಕೆಂದು ಕರೆದರೂ ಯಾರೂ ಬಂದಿಲ್ಲ. ಶೇಂದಿಯಲ್ಲಿ ಎಷ್ಟು ಪ್ರಮಾಣ ಈಥೈಲ್ ಮದ್ಯಸಾರ ಇರಬೇಕೆಂದು ಸರಿಯಾಗಿ ಗೊತ್ತಿಲ್ಲ. ವಶಪಡಿಸಿಕೊಂಡ ಶೇಂದಿಯು ಮಾನವನ ಸೇವನೆಗೆ ಯೋಗ್ಯವಾಗಿದೆಯೇ ಅಥವಾ ಇಲ್ಲವೇ ಎಂಬುವುದರ ಬಗ್ಗೆ ರಾಸಾಯನಿಕ ವಿಶ್ಲೇಷಣಾ ವರದಿಯಲ್ಲಿ ನಮೂದಿಸಿರುವುದಿಲ್ಲ. ಸದರಿ ಪ್ರಕರಣಕ್ಕೆ ಸಂಬಂಧಿಸಿ ಮಾನ್ಯ ನ್ಯಾಯಾಲಯಕ್ಕೆ ದೋಷಾರೋಪಣ ಪಟ್ಟಿ ಸಲ್ಲಿಸಿರುತ್ತೇನೆ. ಈ ಬಗ್ಗೆ ವಾಹನ ಮಾಲೀಕರು ಭಾಗಿಯಾದ ಬಗ್ಗೆ ಯಾವುದೇ ಪುರಾವೆಯನ್ನು ಮಾನ್ಯ ನ್ಯಾಯಾಲಯದಲ್ಲಿ ಹಾಜರುಪಡಿಸಿರುವುದಿಲ್ಲ. ತಾನು ಸರಿಯಾಗಿ ತನಿಖೆ ಮಾಡದೆ ದೋಷಾರೋಪಣ ಪಟ್ಟಿಯನ್ನು ಸಲ್ಲಿಸಿರುವುದಿಲ್ಲ ಎಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

ಪ್ರಕರಣದ ಫಿರ್ಯಾದುದಾರರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:16–12–2005 ರಂದು ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರು ದಾಳಿ ನಡೆಸಿದ ಸಂದರ್ಭದಲ್ಲಿ ಜಪ್ತುಪಡಿಸಿಕೊಂಡಿರುವ ಜೀಪು ಸಂಖ್ಯೆ: ಕೆಎ–19–ಎಂ–5256 ರಲ್ಲಿ ಸುಮಾರು 245 ಲೀಟರ್ ಶೇಂದಿಯನ್ನು ಜೀಪಿನಿಂದಲೇ ವಶಪಡಿಸಿಕೊಳ್ಳಲಾಗಿದೆ ಎಂಬುವುದರ ಬಗ್ಗೆ ಸ್ಥಳ ಮಹಜರಿನಲ್ಲಿ ಕೇವಲ ಇಲಾಖಾ ಸಿಬ್ಬಂದಿಗಳು ಮಾತ್ರ ಸಹಿ ಮಾಡಿದ್ದು, ಹತ್ತಿರದಲ್ಲಿರುವ ಪೊಲೀಸರನ್ನು ಮತ್ತು ಯಾವುದೇ ಪಂಚರ ಸಹಿಯನ್ನು ಪಡೆಯದಿರುವುದು ಸಂಶಯಕ್ಕೆ ಆಸ್ಪದವಾಗಿದ್ದು, ಸದರಿ ಶೇಂದಿಯನ್ನು ವಶಪಡಿಸಿಕೊಳ್ಳಲಾಗಿದೆ ಎಂಬುವುದು ಸಾಬೀತುಪಡಿಸುವ ಬಗ್ಗೆ ಸ್ಪಷ್ಟ ಸಾಕ್ಷ್ಯಾಧಾರಗಳು ಲಭ್ಯವಿರುವುದಿಲ್ಲ.

ಜೀಪು ಸಂಖ್ಯೆ: ಕೆಎ–19–ಎಂ–5256 ರ ಆರ್.ಸಿ.ಮಾಲೀಕರಾದ ಜಾಯಿರ ಯಾನೆ ಅತ್ತಾರ ಬೆಳ್ಚಪಾಡ, ಕನ್ಯಾನ ಗ್ರಾಮ, ಬಂಟ್ವಾಳ ತಾಲೂಕು ಇವರು ಈ ಪ್ರಕರಣ ದಾಖಲಿಸಿರುವ ಪೂರ್ವದಲ್ಲಿ ದಿ:5–2–2000 ರಂದು ನಿಧನರಾಗಿದ್ದು, ಈ ಬಗ್ಗೆ ದೃಢಪತ್ರವನ್ನು ಅವರ ಪತ್ನಿ ಶ್ರೀಮತಿ.ಲಕ್ಷ್ಮಿ ಇವರು ಈ ಪ್ರಾಧಿಕಾರಕ್ಕೆ ನೀಡಿರುತ್ತಾರೆ ಹಾಗೂ ವಾಹನದ ಮಾಲೀಕತ್ವದ ಅಧಿಕಾರವನ್ನು ಅಪಿಢಾವಿತ್ ಮೂಲಕ ಹಾಗೂ ತಹಶೀಲ್ದಾರ್, ಬಂಟ್ವಾಳ ಇವರು ನೀಡಿದ ದೃಢಪತ್ರದ ಮೂಲಕ ವಾಹನದ ಮಾಲೀಕತ್ವವನ್ನು ಅವರ ಪತ್ನಿಯರಾದ ಶ್ರೀಮತಿ.ಲಕ್ಷ್ಮಿ ಪ್ರಾಯ 71 ವರ್ಷ ಇವರಿಗೆ ಮುಂದುವರಿಸಿರುವ ಬಗ್ಗೆ ದೃಢೀಕರಣ ನೀಡಿರುತ್ತಾರೆ. ಆದರೆ ತಕ್ಷೀರನ್ನು ದಿ:16–12–2005 ರಂದು ದಾಖಲಿಸಿದ್ದು, ದಿವಂಗತರಾದ ಜಾಯಿರ ಯಾನೆ ಅತ್ತಾರ ಬೆಳ್ಚಪಾಡ, ಕನ್ಯಾನ ಗ್ರಾಮ, ಬಂಟ್ವಾಳ ತಾಲ್ಲೂಕು ಇವರು ದಿ:5–2–2000 ರಂದು ನಿಧನರಾಗಿರುವುದರಿಂದ ಹಾಗೂ ಅವರ ಪತ್ನಿ ಶ್ರೀಮತಿ.ಲಕ್ಷ್ಮಿರವರಿಗೆ 71 ವರ್ಷವಾಗಿದ್ದು, ಇವರು ಮಾಲೀಕತ್ವದ ಬಗ್ಗೆ ಮುಂದುವರಿಸಿ ತದನಂತರ ದಿ:24–5–2007 ರಿಂದ ದಿವಂಗತರಾದ ಜಾಯಿರ ಯಾನೆ ಅತ್ತಾರ ಬೆಳ್ಚಪಾಡ, ಕನ್ಯಾನ ಗ್ರಾಮ, ಬಂಟ್ವಾಳ ತಾಲೂಕು, ತನ್ನ ಗಂಡನ ಹೆಸರಿನಿಂದ ವಾಹನದ ಮಾಲೀಕತ್ವವನ್ನು ತನ್ನ ಹೆಸರಿಗೆ ವರ್ಗಾಯಿಸಿದ ಬಗ್ಗೆ ದೃಢಪತ್ರವನ್ನು ದಿ:12–7–2007 ರಂದು ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯೊಂದಿಗೆ ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಆದುದರಿಂದ ಈ ಪ್ರಕರಣಕ್ಕೆ ಸಂಬಂಧಿಸಿ ವಾಹನದ ಮಾಲೀಕಳಾದ ಶ್ರೀಮತಿ.ಲಕ್ಷ್ಮಿ ಇವರು ಭಾಗಿಯಾಗಿದ್ದಾರೆ ಎಂಬುವುದರ ಬಗ್ಗೆ ಯಾವುದೇ ಪುರಾವೆಗಳು ಲಭ್ಯವಾಗದೇ ಹಾಗೂ ಆರ್.ಸಿ. ಮಾಲೀಕಳು ಪ್ರಾಯಸ್ಥ ಮಹಿಳೆಯಾಗಿದ್ದು, ತನ್ನ ತಿಳುವಳಿಕೆಯಿಂದಲೇ ಇಂತಹ ಅಕ್ರಮ ಎಸಗಲು ಅವರು ಖುದ್ದಾಗಿ ಭಾಗಿಯಾಗಿರುವ ಬಗ್ಗೆ ಯಾವುದೇ ಸೂಕ್ತ ಪುರಾವೆಗಳು ಲಭ್ಯವಿರುವುದಿಲ್ಲ. ಅಲ್ಲದೆ ಪ್ರಕರಣ ದಾಖಲಿಸಿರುವ ದಿನಾಂಕ:16–12–2005 ರ ಪೂರ್ವದಲ್ಲಿ ತಕ್ಷೀರಿನಲ್ಲಿ ಜಪ್ತುಪಡಿಸಿದ ಆರ್.ಸಿ. ಮಾಲೀಕರಾದ ಜಾಯಿರ ಯಾನೆ ಅತ್ತಾರ ಬೆಳ್ಚಪಾಡ, ಕನ್ಯಾನ ಗ್ರಾಮ, ಬಂಟ್ವಾಳ ತಾಲೂಕು ಎಂಬುವವರು ದಿ:5–2–2000 ರಂದು ಮರಣ ಹೊಂದಿದ್ದು, ಪ್ರಕರಣ ಪತ್ತೆಯಾದ ದಿನಾಂಕದಂದು ಸದರಿ ವಾಹನದ ಆರ್.ಸಿ. ಮಾಲೀಕತ್ವವನ್ನು ಹೊಂದಿರುವುದಿಲ್ಲ. ಸದರಿಯವರು ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಂಗಳೂರು ಇವರಿಂದ ಸದರಿ ವಾಹನದ ಆರ್.ಸಿ. ಮಾಲೀಕತ್ವವನ್ನು ತನ್ನ ಗಂಡನ ಹೆಸರಿನಿಂದ ತನ್ನ ಹೆಸರಿಗೆ ದಿ:24–5–2007 ರಿಂದ ವರ್ಗಾಯಿಸಿದ ಬಗ್ಗೆ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯಿಂದ ತಿಳಿದು ಬಂದಿರುತ್ತದೆ. ಅಲ್ಲದೆ ತನಿಖಾಧಿಕಾರಿಯವರು ಸದರಿ ಪ್ರಕರಣ ದಾಖಲಿಸಿದ ನಂತರ ಓಡಿ ತಪ್ಪಿಸಿಕೊಂಡಿರುವ ಆರೋಪಿ ಯಾರೆಂಬುದು ಇದುವರೆಗೂ ಪತ್ತೆ ಮಾಡಲು ಹಾಗೂ ಅವರ ವಿರುದ್ಧ ಕಾನೂನು ರೀತ್ಯಾ ಕ್ರಮ ಕೈಗೊಂಡು ಮಾನ್ಯ ನ್ಯಾಯಾಲಯದಲ್ಲಿ ಸಲ್ಲಿಸಿರುವ ದೋಷಾರೋಪಣಾ ಪಟ್ಟಿಯಲ್ಲಿ ನಮೂದಿಸಿರುವುದಿಲ್ಲ. ಆದುದರಿಂದ ಎರಡನೇ ವಿವಾದಾಂಶವನ್ನು ಸಕಾರಾತ್ಮಕವಾಗಿ ಪರಿಗಣಿಸಬಹುದಾಗಿದೆ.

ಮೇಲಿನ ಎಲ್ಲಾ ಕಾರಣಗಳಿಂದ ಹಾಗೂ ಪುರಾವೆಗಳಿಂದ ಈ ಪ್ರಕರಣದಲ್ಲಿ ಜಪ್ತುಗೊಳಿಸಿರುವ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸೂಕ್ತ ಸಾಕ್ಷ್ಯಾಧಾರಗಳು ಇಲ್ಲದಿರುವುದು ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/306/ಡಿಟಿಸಿಆರ್/2005–2006, ದಿನಾಂಕ:20ನೇ ಜೂನ್, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಅಬಕಾರಿ ನಿರೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರ ತಕ್ಷೀರು ಸಂ: 5/2005–06 ದಿ:16–12–2005 ರಲ್ಲಿ ಜಪ್ತುಪಡಿಸಿರುವ ಜೀಪು ಸಂಖ್ಯೆ: ಕೆಎ–19–ಎಂ–5256 ನ್ನು

ಪ್ರಕರಣ ದಾಖಲಿಸಿದ ನಂತರದಲ್ಲಿ ಆರ್.ಸಿ.ಮಾಲೀಕಳಾದ ಶ್ರೀಮತಿ.ಲಕ್ಷ್ಮಿ ಪ್ರಾಯ 71 ವರ್ಷ, ಕೋಂ: ದಿವಂಗತ ಜಾಯಿರ ಯಾನೆ ಅತ್ತಾರ ಬೆಳ್ಚಪಾಡ, ಕನ್ಯಾನ ಗ್ರಾಮ, ಬಂಟ್ವಾಳ ತಾಲ್ಲೂಕು ಇವರ ಪರ ಬಿಡುಗಡೆಗೆ ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದಿಂದ ದಿ:12–7–2007 ರಂದು ವಾಹನ ಬಿಡುಗಡೆಗೊಳಿಸಿ ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಆರ್.ಸಿ. ಮಾಲೀಕರು ಮಧ್ಯಂತರ ಬಿಡುಗಡೆ ಹೊಂದಿರುವ ಜೀಪು ಸಂಖ್ಯೆ: ಕೆಎ–19–ಎಂ–5256 ಕ್ಕೆ ಸಂಬಂಧಿಸಿ ಈ ಪ್ರಾಧಿಕಾರಕ್ಕೆ ಒಪ್ಪಿಸಿರುವ ಬ್ಯಾಂಕ್ ಗ್ಯಾರಂಟಿ ಪತ್ರವನ್ನು ಹಿಂದಕ್ಕೆ ನೀಡಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:20–06–2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಶ್ರೀ.ಅಮರನಾಥ.ಎಸ್.ಎಸ್. ಭಂಡಾರಿ, ಅಬಕಾರಿ ನಿರೀಕ್ಷಕರು ಬಂಟ್ವಾಳ ಉಪ ವಿಭಾಗ, ಬಂಟ್ವಾಳ

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1 : ಮಹಜರ್ ಪ್ರತಿ
ನಿಶಾನೆ ಪಿ–1ಎ : ಮಹಜರ್‌ನಲ್ಲಿ ಫಿರ್ಯಾದುದಾರರ ಸಹಿ
ನಿಶಾನೆ ಪಿ–2 : ಸರ್ಚ್ ಮೆಮೊ
ನಿಶಾನೆ ಪಿ–3 : ಸೊತ್ತುಗಳ ಪಟ್ಟಿ
ನಿಶಾನೆ ಪಿ–4 : ಕಲಂ 43ಎ ಅಡಿಯಲ್ಲಿ ವರದಿ ಪ್ರತಿ
ನಿಶಾನೆ ಪಿ–5 : ಕೆಮಿಕಲ್ ವರದಿ
ನಿಶಾನೆ ಪಿ–6 : ತನಿಖಾ ವರದಿ

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.623

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/91/ಡಿಟಿಸಿಆರ್/2007–08, ದಿನಾಂಕ:20ನೇ ಜೂನ್, 2009**

ಉಪಸ್ಥಿತರು: ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಅಬಕಾರಿ ಉಪ ನಿರೀಕ್ಷಕರು(ನಂ.2),
ಜಾರಿ ಮತ್ತು ತನಿಖೆ, ಬಂಟ್ವಾಳ.

**ಆರೋಪಿ:**

ಆರೋಪಿಗಳು ಪರಾರಿಯಾಗಿರುತ್ತಾರೆ.

**ವಾಹನ ಮಾಲೀಕರು:**

ಶ್ರೀ.ಉಮೇಶ್ ಮೂಲ್ಯ, ಬಿನ್: ಮೊಂಟೆ ಮೂಲ್ಯ, ಕಾವಳಮೂಡು ಗ್ರಾಮ, ಕಾವಳಕಟ್ಟೆ ಅಂಚೆ, ಬಂಟ್ವಾಳ ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:26–09–2007 ರಂದು ಮಧ್ಯಾಹ್ನ ಸುಮಾರು 3–00 ಗಂಟೆ ಸಮಯದಲ್ಲಿ ಫಿರ್ಯಾದುದಾರರು ಮತ್ತು ಸಿಬ್ಬಂದಿಯವರು ಬಂಟ್ವಾಳ ತಾಲ್ಲೂಕು ಮಣಿನಾಲ್ಕೂರು ಗ್ರಾಮದಲ್ಲಿ ಬಂಟ್ವಾಳದಿಂದ ಬೆಳ್ತಂಗಡಿಗೆ ಹೋಗುವ ರಸ್ತೆಯ ಬದಿಯಲ್ಲಿ ರಸ್ತೆಗಾವಲು ನಡೆಸಿ ವಾಹನಗಳನ್ನು ತಪಾಸಣೆ ಮಾಡುತ್ತಿದ್ದ ಸಂದರ್ಭದಲ್ಲಿ ಸುಮಾರು 100 ಮೀಟರ್ ದೂರದಿಂದ ಬಜಾಜ್ ಆಟೋರಿಕ್ಷಾ ಬರುತ್ತಿದ್ದು, ಸಮವಸ್ತ್ರದಲ್ಲಿದ್ದ ಸಿಬ್ಬಂದಿಯವರನ್ನು ಕಂಡು ಸದರಿ ಆಟೋರಿಕ್ಷಾದ ಚಾಲಕ ರಿಕ್ಷಾವನ್ನು ರಸ್ತೆ ಬದಿಯಲ್ಲಿ ನಿಲ್ಲಿಸಿ ಪಕ್ಕದ ಗುಡ್ಡ ಪ್ರದೇಶಕ್ಕೆ ಓಡಿ ಹೋದನು. ಸಂಶಯದ ಮೇರೆಗೆ ಸದರಿ ಆಟೋರಿಕ್ಷಾವನ್ನು ಪರಿಶೀಲಿಸಿದಾಗ, 5 ಗೋಣಿ ಚೀಲಗಳಲ್ಲಿ ಸಾರಾಯಿ ತುಂಬಿದ ಸ್ಯಾಚೆಟ್‌ಗಳಿರುವುದು ಕಂಡು ಬಂತು. ಇದನ್ನು ಅಕ್ರಮವಾಗಿ ಮಾರಾಟ ಮಾಡಲು ಉದ್ದೇಶಿಸಿ

ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ, ಸದರಿ ಸಾರಾಯಿ ಸ್ಯಾಚೆಟ್‌ಗಳನ್ನು ಎಣಿಸಿದಾಗ 5 ನೈಲಾನ್ ಚೀಲದಲ್ಲಿ ತಲಾ 260 ರಂತೆ ಒಟ್ಟು 1300 ಸಾರಾಯಿ ಸ್ಯಾಚೆಟ್‌ಗಳಿರುವುದು ಕಂಡು ಬಂತು. ತಕ್ಷೀರು ನಡೆದ ಸ್ಥಳವು ನಿರ್ಜನವಾಗಿದ್ದು, ರಸ್ತೆಯಲ್ಲಿ ಓಡಾಡುತ್ತಿದ್ದ ವ್ಯಕ್ತಿಗಳಲ್ಲಿ ಪಂಚರಾಗಿ ಸಹಕರಿಸುವಂತೆ ಕೋರಿದಾಗ, ಯಾರೂ ಮುಂದೆ ಬಾರದ ಕಾರಣ ಸಿಬ್ಬಂದಿಯವರನ್ನೇ ಪಂಚರಾಗಿ ಇರಿಸಿಕೊಂಡು, ಸದರಿ 5 ಚೀಲಗಳಿಂದ ರಾಸಾಯನಿಕ ಪರೀಕ್ಷೆಗಾಗಿ ತಲಾ 100 ಎಂ.ಎಲ್. ನ 5 ಸಾರಾಯಿ ಸ್ಯಾಚೆಟ್‌ಗಳನ್ನು ಪ್ರತ್ಯೇಕಿಸಿ, ಅದಕ್ಕೆ ಬಟ್ಟೆದಾರ ಕಟ್ಟಿ ದೊರೆತ ಸೊತ್ತುಗಳಿಗೆ ಕ್ರಮವಾಗಿ 1 ರಿಂದ 5 ವರೆಗೆ ಕ್ರಮ ಸಂಖ್ಯೆಯನ್ನು ನೀಡಿ ಇಲಾಖಾ ಸೀಲ್‌ನಿಂದ ಸೀಲ್ ಮಾಡಲಾಯಿತು. ನಂತರ ಸಾಗಾಟಕ್ಕೆ ಬಳಸಿದ ಆಟೋರಿಕ್ಷಾ ನೋಂದಣಿ ಸಂಖ್ಯೆ: ಕೆಎ–19–ಬಿ–7081 ಹೊಂದಿರುವ ಬಜಾಜ್ ಆಟೋರಿಕ್ಷಾ ಮತ್ತು ಸೊತ್ತುಗಳನ್ನು ಮಹಜರು ಮುಖೇನ ಸ್ಥಳದಿಂದ ಇಲಾಖಾ ವಶಕ್ಕೆ ತೆಗೆದುಕೊಂಡು, ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 11, 14 ರ ಪ್ರಕಾರ ಅಪರಾಧವಾಗಿದ್ದು, ಕಲಂ 32, 34, 38ಎ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಮಹಜರನ್ನು ಸ್ಥಳದಲ್ಲಿಯೇ ಬರೆದು, ಓಡಿ ಹೋದ ಚಾಲಕನ ಹೆಸರು ಉಮೇಶ್ ಮೂಲ್ಯ ಎಂದು ತಿಳಿದು ಇವರ ವಿರುದ್ದ ತಕ್ಷೀರು ಸಂ:5/2007–08 ದಿ:26–09–2007 ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕರೆಂದು ಉಮೇಶ್ ಮೂಲ್ಯ,ಬಿನ್:ಮೊಂಟೆ ಮೂಲ್ಯ, ಕಾವಳಮೂಡು ಗ್ರಾಮ, ಕಾವಳಕಟ್ಟೆ ಅಂಚೆ, ಬಂಟ್ವಾಳ ತಾಲ್ಲೂಕು ಇವರು ತನ್ನ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿ: 22–12–2007 ಮತ್ತು ದಿ: 27–12–2007 ರಂದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43ಎ ಪ್ರಕಾರ ಅರ್ಜಿ ಸಲ್ಲಿಸಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾವನ್ನು ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಬೇಕೆಂದು ತನ್ನ ಅರ್ಜಿಯಲ್ಲಿ ಕೋರಿರುತ್ತಾರೆ.

ಅರ್ಜಿದಾರರು ಸಲ್ಲಿಸಿದ ಅರ್ಜಿಯ ಬಗ್ಗೆ ಸಹಾಯಕ ಅಭಿಯೋಗ ನಿರ್ದೇಶಕರು, ಮಂಗಳೂರು ಇವರಿಗೆ ಈ ಪ್ರಾಧಿಕಾರದಿಂದ ದಿ: 24–12–2007 ರಂದು ಮಧ್ಯಂತರ ಬಿಡುಗಡೆ ಬಗ್ಗೆ ಆಕ್ಷೇಪಣೆಗಳನ್ನು ಸಲ್ಲಿಸುವಂತೆ ಪತ್ರ ಬರೆಯಲಾಗಿದೆ ಹಾಗೂ ವಾಹನದ ಪ್ರಸ್ತುತ ಮೌಲ್ಯವನ್ನು ನಿರ್ಧರಿಸುವ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ದ.ಕ.ಜಿಲ್ಲೆ, ಮಂಗಳೂರು ಇವರಿಗೆ ಈ ಪ್ರಾಧಿಕಾರದಿಂದ ದಿ: 27–12–2007 ರಂದು ಪತ್ರ ಬರೆಯಲಾಗಿದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾ ಸಂಖ್ಯೆ: ಕೆಎ–19–ಬಿ–7081 ರ ಮಧ್ಯಂತರ ಬಿಡುಗಡೆಗೆ ಸಲ್ಲಿಸಿದ ಅರ್ಜಿಯ ಬಗ್ಗೆ ಅಂದಿನ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇ.ಐ.ಬಿ. ದ.ಕ.ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ ವಿಚಾರಣೆಯನ್ನು ಕೈಗೊಂಡು ಮೋಟಾರು ವಾಹನ ನಿರೀಕ್ಷಕರು, ಸಾರಿಗೆ ಇಲಾಖೆ, ಮಂಗಳೂರು ಇವರು ದಿ:12–2–08 ರಂದು ನೀಡಿದ ದೃಢೀಕರಣ ಪತ್ರದಲ್ಲಿ ವಾಹನದ ಈಗಿನ ಪ್ರಸ್ತುತ ಮೌಲ್ಯ ರೂ.45,000/–ಕ್ಕೆ ಅನುಗುಣವಾಗಿ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಬ್ಯಾಂಕ್ ಭದ್ರತೆಯನ್ನು ಒದಗಿಸಿದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಬಜಾಜ್ ಆಟೋರಿಕ್ಷಾವನ್ನು ಈ ಪ್ರಾಧಿಕಾರದ ಆದೇಶ ಸಂಖ್ಯೆ: ಇ.ಐ.ಬಿ/ ಡಿಟಿಸಿಆರ್/91/2007–08 ದಿ:20–2–2008 ರ ಆದೇಶದಲ್ಲಿ ಇತರ ಷರತ್ತುಗಳಿಗೆ ಅನುಗುಣವಾಗಿ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಲು ಆದೇಶಿಸಿರುತ್ತಾರೆ.

ಅರ್ಜಿದಾರರು ಸದರಿ ಆದೇಶದ ಅನುಸಾರ ಈ ಪ್ರಾಧಿಕಾರಕ್ಕೆ ವಾಹನದ ಮೌಲ್ಯಕ್ಕೆ ಸಮಾನವಾದ ಮೊತ್ತ ರೂ.45,000/–ಕ್ಕೆ ಬ್ಯಾಂಕ್ ಗ್ಯಾರಂಟಿಯನ್ನು ಸಿಂಡಿಕೇಟ್ ಬ್ಯಾಂಕ್, ಕಾವಳಪಡೂರು, ವಗ್ಗ ಶಾಖೆ ಇಲ್ಲಿಂದ ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ ಹಾಗೂ ಪ್ರಾಧಿಕಾರದ ಮುಂದೆ ಷರತ್ತುಗಳ ಪಾಲನೆ ಬಗ್ಗೆ ಮುಚ್ಚಳಿಕೆ ಪತ್ರವನ್ನು ನೀಡಿರುವುದರಿಂದ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾವನ್ನು ಅರ್ಜಿದಾರರ ಮಧ್ಯಂತರ ಸುಪರ್ಧಿಗೆ ದಿ:4–3–08 ರಂತೆ ಬಿಡುಗಡೆಗೊಳಿಸಲಾಗಿರುತ್ತದೆ.

ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರ ತನಿಖಾ ವರದಿ ಸಂ:ಸಿಆರ್‌ಎಂ/26/ 2007–08 ದಿ: 27–6–2008 ರ ವರದಿ ಮತ್ತು ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ, ಬಂಟ್ವಾಳ ಇವರ ತನಿಖಾ ವರದಿ ಸಂ:ಬಿಎನ್‌ಟಿ/ಸಿಆರ್‌ಎಂ/14/2007–08 ದಿ:20–6–08ರ ವರದಿಯಲ್ಲಿ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೆಟ್‌ಗಳಿಂದ ತೆಗೆದ ಸ್ಯಾಂಪಲ್‌ಗಳನ್ನು ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರಿಗೆ ಕಳುಹಿಸಲಾಗಿದ್ದು, ಇವರ ವರದಿ ಸಂಖ್ಯೆ: ಇ–319–20 ದಿ:6–11–2007 ರ ವರದಿಯಲ್ಲಿ ಸಾರಾಯಿಯ ಮದ್ಯಸಾರ ಪ್ರಮಾಣ ಶೇ.30 ಇರುವುದಾಗಿ ದೃಢೀಕರಣ ಪತ್ರ ನೀಡಿರುವುದರಿಂದ, ತಕ್ಷೀರಿನಲ್ಲಿ ವಶಪಡಿಸಿಕೊಂಡ ಸಾರಾಯಿ ಸ್ಯಾಚೆಟ್‌ಗಳನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಅಬಕಾರಿ ಉಪ ಅಧೀಕ್ಷಕರು ಹಾಗೂ ಅಬಕಾರಿ ನಿರೀಕ್ಷಕರ ತನಿಖಾ ವರದಿಯನ್ನು ಆಧರಿಸಿ ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಇವರ ಆದೇಶ ಸಂಖ್ಯೆ: ಎಸ್‌ಡಿಕೆ/91/ಡಿಟಿಸಿಆರ್/2007–08 ದಿ:20–1–2009 ರ ಆದೇಶದಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸಾರಾಯಿಯನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡ ಸಾರಾಯಿಯನ್ನು ಅಬಕಾರಿ ನಿರೀಕ್ಷಕರು, ಬಂಟ್ವಾಳ ವಲಯ ಇವರ ಸಮಕ್ಷಮ ನಾಶಪಡಿಸಲು ಆದೇಶಿಸಲಾಗಿದೆ.

ವಾಹನದ ಮಾಲೀಕರಾದ ಉಮೇಶ್ ಮೂಲ್ಯ ಇವರಿಗೆ ಕರ್ನಾಟಕ ಅಬಕಾರಿ ಕಾಯಿದೆ 1965 ರ ಸೆಕ್ಷನ್ 43ಬಿ ಪ್ರಕಾರ ಕಾರಣ ಕೇಳಿ ನೋಟೀಸನ್ನು ಈ ಪ್ರಾಧಿಕಾರದ ಆದೇಶ ಸಮ ಸಂಖ್ಯೆ ದಿ:17–7–2008 ರಂದು ನೋಂದಣಿ ಅಂಚೆ ಮೂಲಕ

ನೀಡಲಾಗಿದ್ದು, ಸದರಿ ನೋಟೀಸನ್ನು ಅರ್ಜಿದಾರರು ದಿ:25–7–2008 ರಂದು ಸ್ವೀಕರಿಸಿ, ಅವರು ತನ್ನ ವಕೀಲರ ಮುಖಾಂತರ ಕಾರಣ ಕೇಳಿ ನೋಟೀಸಿಗೆ ದಿ:29–7–2008 ರಂದು ಉತ್ತರವನ್ನು ಸಲ್ಲಿಸಿರುತ್ತಾರೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

**1) ಮೊದಲನೇ ವಿವಾದಾಂಶ:** ದಿ:26–9–2007 ರಂದು ಬಜಾಜ್ ಆಟೋರಿಕ್ಷಾ ಸಂಖ್ಯೆ: ಕೆಎ–19–ಬಿ–7081 ರಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

**2) ಎರಡನೇ ವಿವಾದಾಂಶ:** ಸದರಿ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

**3) ಮೂರನೇ ವಿವಾದಾಂಶ:** ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: 1**

ಪ್ರಾಸಿಕ್ಯೂಶನ್ ಪರ ಪ್ರಕರಣದ ಫಿರ್ಯಾದುದಾರರು ಹಾಗೂ ತನಿಖಾಧಿಕಾರಿಯಾದ ಶ್ರೀಮತಿ.ಶೋಭಾ, ಅಬಕಾರಿ ಉಪ ನಿರೀಕ್ಷಕರು (ನಂ.2), ಬಂಟ್ವಾಳ ವಲಯ, ಬಂಟ್ವಾಳ ಇವರು ದಿ:10–12–2008 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ಕಳೆದ ಎರಡು ವರ್ಷಗಳಿಂದ ಬಂಟ್ವಾಳ ಜಾರಿ ಮತ್ತು ತನಿಖೆ ವಿಭಾಗದಲ್ಲಿ ಅಬಕಾರಿ ಉಪ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ತಾನು ದಿ: 26–9–07 ರಂದು ಬಂಟ್ವಾಳದಿಂದ ಬೆಳ್ತಂಗಡಿಗೆ ಹೋಗುವ ಮುಖ್ಯ ರಸ್ತೆಯಲ್ಲಿ ರಸ್ತೆಗಾವಲು ನಡೆಸುತ್ತಿರುವಾಗ, ಮಣಿನಾಲ್ಕೂರು ಕಡೆಯಿಂದ ಬೆಳ್ತಂಗಡಿ ಕಡೆಗೆ ಬರುತ್ತಿದ್ದ ಬಜಾಜ್ ಆಟೋರಿಕ್ಷಾವನ್ನು ತಡೆದು ನಿಲ್ಲಿಸಿದಾಗ, ಅದರಲ್ಲಿ ಚಾಲಕ ಮಾತ್ರ ಇದ್ದು, ಆತನು ರಿಕ್ಷಾ ಬಿಟ್ಟು ಓಡಿ ಹೋದನು. ಸದರಿ ಆಟೋರಿಕ್ಷಾವು ಪ್ಯಾಸೆಂಜರ್ ವಾಹನವಾಗಿದ್ದು, ಅದರ ಎರಡು ಬದಿಯಲ್ಲಿ ಟರ್ಪಾಲ್ ಮುಚ್ಚಲಾಗಿದ್ದು ಅದನ್ನು ಬಿಚ್ಚಿ ನೋಡಿದಾಗ, ಅದರಲ್ಲಿ 5 ಗೋಣಿ ಚೀಲಗಳಿದ್ದು, ಪ್ರತಿಯೊಂದರಲ್ಲಿ ತಲಾ 260 ರಂತೆ ಒಟ್ಟು 1300 ಸಾರಾಯಿ ಸ್ಯಾಚೆಟ್‌ಗಳಿದ್ದವು. ಸದರಿ ಸ್ಥಳದಲ್ಲಿ ಮಹಜರನ್ನು ತಯಾರಿಸಲು ಯಾರೂ ಪಂಚರು ಸಿಗದ ಕಾರಣ ಇಲಾಖಾ ಸಿಬ್ಬಂದಿಯವರನ್ನೇ ಮುಂದಿಟ್ಟು ಮಹಜರನ್ನು ಬರೆಯಲಾಯಿತು. ಪ್ರತಿಯೊಂದು ಗೋಣಿ ಚೀಲದಿಂದ ತಲಾ 4 ರಂತೆ 5 ಬ್ಯಾಗ್‌ಗಳಿಂದ ಒಟ್ಟು 20 ಸಾರಾಯಿ ಸ್ಯಾಚೆಟ್‌ಗಳನ್ನು ರಾಸಾಯನಿಕ ಪರೀಕ್ಷೆಗೆ ಪ್ರತ್ಯೇಕಿಸಿ ಬಟ್ಟೆದಾರ ಕಟ್ಟಿ ಸೀಲ್ ಮಾಡಲಾಯಿತು. ಸಾಗಾಟಕ್ಕೆ ಬಳಸಿದ ಬಜಾಜ್ ಆಟೋರಿಕ್ಷಾವನ್ನು ಪರಿಶೀಲಿಸಿದಾಗ, ಇದರ ನೋಂದಣಿ ಸಂಖ್ಯೆ: ಕೆಎ–19–ಬಿ–7081 ಆಗಿರುತ್ತದೆ. ಅದೇ ದಾರಿಯಲ್ಲಿ ಹೋಗುತ್ತಿದ್ದ ವ್ಯಕ್ತಿಯನ್ನು ವಿಚಾರಿಸಿದಾಗ, ಚಲಾಯಿಸುತ್ತಿದ್ದ ರಿಕ್ಷಾ ಚಾಲಕ ಉಮೇಶ್ ಮೂಲ್ಯ ಎಂಬುವುದು ತಿಳಿದು ಬಂತು. ಮಹಜರನ್ನು ಮಧ್ಯಾಹ್ನ 3–00 ಗಂಟೆಯಿಂದ 3–45 ಗಂಟೆಯವರೆಗೆ ಸ್ಥಳದಲ್ಲಿಯೇ ಮಹಜರು ಬರೆದು ರಿಕ್ಷಾ ಸಮೇತ ಸಾರಾಯಿಯನ್ನು ವಶಪಡಿಸಿಕೊಳ್ಳಲಾಯಿತು. ಮಹಜರನ್ನು ನಿಶಾನೆ ಪಿ–1 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–1ಎ ಎಂದು, ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ–2 ಎಂದು, ಸಾರಿಗೆ ಅಧಿಕಾರಿಗಳು ಸಲ್ಲಿಸಿದ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ನಿಶಾನೆ ಪಿ–3 ಎಂದು, ರಾಸಾಯನಿಕ ತಜ್ಞರು ಸಲ್ಲಿಸಿದ ವರದಿಯನ್ನು ನಿಶಾನೆ ಪಿ–4 ಎಂದು ಹಾಗೂ ತಾನು ದಿ:11–7–2008 ರಂದು ಸಲ್ಲಿಸಿದ ವರದಿಯನ್ನು ನಿಶಾನೆ ಪಿ–5 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–5ಎ ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ, ತಕ್ಷೀರು ನಡೆದ ದಿನಾಂಕದಂದು ತಾನು ಐದಾರು ವಾಹನಗಳನ್ನು ಪರಿಶೀಲಿಸಿದೆನು. ಮಾನ್ಯ ನ್ಯಾಯಾಲಯಕ್ಕೆ ದೋಷಾರೋಪಣ ಪಟ್ಟಿಯನ್ನು ಸಲ್ಲಿಸಿರುತ್ತೇನೆ. ತಾನು ಸುಳ್ಳು ಮೊಕದ್ದಮೆಯನ್ನು ದಾಖಲಿಸಿರುತ್ತೇನೆ ಎಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ. ಸಾಕ್ಷಿದಾರರು ನೀಡಿರುವ ಸಾಕ್ಷಿಯು ಮಹಜರಿನಲ್ಲಿ ನಮೂದಿಸಿದ ಅಂಶಗಳಿಗೂ ಹಾಗೂ ಅವರು ನೀಡಿರುವ ಸಾಕ್ಷಿಯು ಒಂದಕ್ಕೊಂದು ಪೂರಕವಾಗಿರುತ್ತದೆ. ಈ ಸಾಕ್ಷಿದಾರರಿಂದ ಅರ್ಜಿದಾರರಿಗೆ ಯಾವುದೇ ಪ್ರಯೋಜನ ದೊರೆತ್ತಿರುವುದಿಲ್ಲ.

**ಪ್ರಾ.ಸಾ: 2**

ಪ್ರಾಸಿಕ್ಯೂಶನ್ ಪರ ಪ್ರಕರಣದ ಕೆಮಿಕಲ್ ಕ್ಯಾರಿಯರ್ ಆಗಿದ್ದ ಶ್ರೀ.ಶಿವರಾಮ, ಅಬಕಾರಿ ರಕ್ಷಕ ಬಂಟ್ವಾಳ ವಲಯ, ಬಂಟ್ವಾಳ ಇವರು ದಿ:10–12–2008 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ದಿ:5–10–2007 ರಂದು 100 ಎಂ.ಎಲ್.ನ ಒಟ್ಟು 20 ಸಾರಾಯಿ ಸ್ಯಾಚೆಟ್‌ಗಳನ್ನು ರಾಸಾಯನಿಕ ತಜ್ಞರಲ್ಲಿ ಪರೀಕ್ಷೆಗೆ ತೆಗೆದುಕೊಂಡು ಹೋಗಿರುತ್ತೇನೆ ಹಾಗೂ ದಿ:6–11–2007 ರಂದು ರಾಸಾಯನಿಕ ತಜ್ಞರು ಪರಿಶೀಲಿಸಿದ ವರದಿ ಹಾಗೂ ಸ್ಯಾಂಪಲ್‌ಗಳನ್ನು ತೆಗೆದುಕೊಂಡು ಕಚೇರಿಗೆ ತಲುಪಿಸಿರುತ್ತೇನೆಂದು ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತಾ,ತಾನು ಮೇಲಾಧಿಕಾರಿಗಳಿಗೆ ತೃಪ್ತಿಪಡಿಸುವ ಬಗ್ಗೆ ಸುಳ್ಳು ಸಾಕ್ಷಿ ಹೇಳಿರುತ್ತೇನೆ ಎಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

ಅರ್ಜಿದಾರರಿಗೆ ಹಾಗೂ ಅವರ ಪರ ವಕೀಲರಿಗೆ ಈ ಪ್ರಾಧಿಕಾರದಿಂದ ರಕ್ಷಣಾ ಸಾಕ್ಷಿ ವಿಚಾರಣೆಯನ್ನು ಹಾಜರುಪಡಿಸಲು ಹಲವಾರು ಬಾರಿ ನೋಟೀಸನ್ನು ನೀಡಿದರೂ ಸದರಿ ನೋಟೀಸು ಸ್ವೀಕೃತವಾದ ಬಗ್ಗೆ ಸ್ವೀಕೃತಿ ರಶೀದಿ ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿದ್ದು, ಈ ಬಗ್ಗೆ ಸಾಕಷ್ಟು ಕಾಲಾವಕಾಶ ನೀಡಿದರೂ ತಮ್ಮ ರಕ್ಷಣಾ ಸಾಕ್ಷಿಯನ್ನು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುವುದಿಲ್ಲ.

ಪ್ರಕರಣದ ಫಿರ್ಯಾದುದಾರರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:26–9–2007 ರಂದು ಜಪ್ತುಪಡಿಸಿಕೊಂಡಿರುವ ಆಟೋರಿಕ್ಷಾ ಸಂ:ಕೆಎ–19–ಬಿ–7081 ರಲ್ಲಿ ಅಕ್ರಮವಾಗಿ 100 ಎಂ.ಎಲ್.ನ 1300 ಸಾರಾಯಿ ಸ್ಯಾಚೆಟ್‌ಗಳನ್ನು ಅಕ್ರಮ ಸಾಗಾಣಿಕೆಯಾಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಇಂತಹ ಅಕ್ರಮ ಸಾರಾಯಿ ಸಾಗಾಟ ತನ್ನ ತಿಳುವಳಿಕೆಗೆ ಬಾರದೆ ನಡೆದಿದೆ ಎಂಬುವುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಈ ಕಾರಣದಿಂದ ವಾಹನ ಮಾಲೀಕರು ಅವರ ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಅಲ್ಲದೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ರಕ್ಷಣಾ ಸಾಕ್ಷಿ ನೀಡಿರುವುದಿಲ್ಲ. ಅಬಕಾರಿ ಉಪ ನಿರೀಕ್ಷಕರು(ನಂ.2),ಜಾರಿ ಮತ್ತು ತನಿಖೆ, ಬಂಟ್ವಾಳ ಇವರು ದಿ:26–9–2007 ರಂದು ಅಕ್ರಮ ಸಾರಾಯಿ ಸಾಗಾಟ ಮಾಡುತ್ತಿರುವುದನ್ನು ಪತ್ತೆ ಮಾಡಿದ್ದು, ಇದು ಅಕ್ರಮ ನಕಲಿ ಸಾರಾಯಿ ಸಾಗಾಟವಾಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುತ್ತದೆ ಹಾಗೂ ತಕ್ಷೀರು ನಡೆದ ಸಂದರ್ಭದಲ್ಲಿ ವಾಹನ ಸಾರ್ವಜನಿಕರ ಬಾಡಿಗೆ ವಾಹನವಾಗಿದ್ದರೂ, ಅದರಲ್ಲಿ ಚಾಲಕನಲ್ಲದೆ ಬೇರೆ ಯಾವುದೇ ಪ್ರಯಾಣಿಕರು ಪ್ರಯಾಣಿಸುತ್ತಿರಲಿಲ್ಲ. ಆದುದರಿಂದ ವಾಹನ ಮಾಲೀಕನೇ ಸ್ವತ: ತನ್ನ ಆಟೋರಿಕ್ಷಾವನ್ನು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ. ಈ ಮೇಲಿನ ಕಾರಣಗಳಿಂದ ಎರಡನೇ ಅಂಶವನ್ನು ನಕಾರಾತ್ಮಕವಾಗಿ ಪರಿಗಣಿಸಿದೆ.

ಈ ಮೇಲಿನ ಎಲ್ಲಾ ಕಾರಣಗಳಿಂದ ಮಹಜರು ಸಾಕ್ಷಿಗಳ ವಿಚಾರಣೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಆಟೋರಿಕ್ಷಾದಲ್ಲಿ ಅಕ್ರಮವಾಗಿ ಸಾರಾಯಿ ಸಾಗಾಟ ಮಾಡಲು ಬಳಸಲಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43ಎ ರಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಆಟೋರಿಕ್ಷಾ ಸಂಖ್ಯೆ: ಕೆಎ–19–ಬಿ–7081 ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/91/ಡಿಟಿಸಿಆರ್/2007–08, ದಿನಾಂಕ:20ನೇ ಜೂನ್, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಅಬಕಾರಿ ಉಪ ನಿರೀಕ್ಷಕರು(ನಂ.2), ಜಾರಿ ಮತ್ತು ತನಿಖೆ, ಬಂಟ್ವಾಳ ಇವರ ತಕ್ಷೀರು ಸಂ: 5/2007–08 ದಿ:26–9–2007 ರಲ್ಲಿ ಜಪ್ತುಪಡಿಸಿರುವ ಬಜಾಜ್ ಆಟೋರಿಕ್ಷಾ ಸಂಖ್ಯೆ: ಕೆಎ–19–ಬಿ–7081 ನ್ನು ನಿಯಮ 43ಎ(2) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಪ್ರಾಧಿಕಾರದಿಂದ ದಿ:20–2–2008 ಮತ್ತು ದಿ:3–3–2008 ರಂದು ವಾಹನ ಬಿಡುಗಡೆಗೊಳಿಸಿ ತಾತ್ಕಾಲಿಕವಾಗಿ ಮಧ್ಯಂತರ ಬಿಡುಗಡೆ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಆರ್.ಸಿ. ಮಾಲೀಕರು ಸದರಿ ಮಧ್ಯಂತರ ಬಿಡುಗಡೆ ಹೊಂದಿರುವ ಆಟೋರಿಕ್ಷಾ ಸಂಖ್ಯೆ: ಕೆಎ–19–ಬಿ–7081 ನ್ನು ಈ ಆದೇಶದ 30 ದಿನಗಳ ಒಳಗೆ ಈ ಪ್ರಾಧಿಕಾರದ ವಶಕ್ಕೆ ಅಬಕಾರಿ ಉಪ ಅಧೀಕ್ಷಕರು, ಬಂಟ್ವಾಳ ಉಪ ವಿಭಾಗ, ಬಂಟ್ವಾಳ ಇವರಲ್ಲಿ ಒಪ್ಪಿಸಲು ಆದೇಶಿಸಿದೆ. ತಪ್ಪಿದಲ್ಲಿ ಭದ್ರತೆಯಾಗಿ ನೀಡಿರುವ ಬ್ಯಾಂಕ್ ಗ್ಯಾರಂಟಿ ಮೊತ್ತ ರೂ.45,000/– ವನ್ನು ಸರಕಾರಕ್ಕೆ ಪಡೆದು ಚಲನ್ ಮೂಲಕ ಖಜಾನೆಗೆ ಪಾವತಿಸಿಕೊಳ್ಳಲು ಆದೇಶಿಸಿದೆ.

ಈ ಆದೇಶವನ್ನು ದಿ:20–06–2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾಸಾ: 1 - ಅಬಕಾರಿ ಉಪ ನಿರೀಕ್ಷಕರು(ನಂ.2), ಜಾರಿ ಮತ್ತು ತನಿಖೆ, ಬಂಟ್ವಾಳ.

ಪ್ರಾಸಾ: 2 - ಶ್ರೀ.ಶಿವರಾಮ, ಅಬಕಾರಿ ರಕ್ಷಕ ಬಂಟ್ವಾಳ ವಲಯ, ಬಂಟ್ವಾಳ.

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1 : ಮಹಜರ್ ಪ್ರತಿ

ನಿಶಾನೆ ಪಿ–1ಎ : ಮಹಜರ್‌ನಲ್ಲಿ ಫಿರ್ಯಾದುದಾರರ ಸಹಿ

ನಿಶಾನೆ ಪಿ–2 : ಪ್ರಥಮ ಮಾಹಿತಿ ವರದಿ

ನಿಶಾನೆ ಪಿ–2ಎ : ಪ್ರಥಮ ಮಾಹಿತಿ ವರದಿಯಲ್ಲಿ ಫಿರ್ಯಾದುದಾರರ ಸಹಿ

ನಿಶಾನೆ ಪಿ–3 : ಬಿ ಅಬ್ ಸ್ಟ್ರ್ಯಾಕ್ಟ್ ವರದಿ.

ನಿಶಾನೆ ಪಿ–4 : ಕೆಮಿಕಲ್ ವರದಿ

ನಿಶಾನೆ ಪಿ–5 : ತನಿಖಾ ವರದಿ

**ಅನುಬಂಧ–3**

ವಾಹನ ಮಾಲೀಕರ ಪರ ವಿಚಾರಣೆಗೆ ಯಾರೂ ಹಾಜರಾಗಿರುವುದಿಲ್ಲ.

**ಅನುಬಂಧ–4**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**

ಪಿ.ಆರ್.624

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಎಸ್‌ಡಿಕೆ/413/ಡಿಟಿಸಿಆರ್/2007–08, ದಿನಾಂಕ:20ನೇ ಜೂನ್, 2009**

ಉಪಸ್ಥಿತರು: ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**

ಅಬಕಾರಿ ಉಪ ನಿರೀಕ್ಷಕರು(ನಂ.1),
ಬೆಳ್ತಂಗಡಿ ವಲಯ, ಬೆಳ್ತಂಗಡಿ.

**ಆರೋಪಿ:**

ಆರೋಪಿಗಳು ಪರಾರಿಯಾಗಿರುತ್ತಾರೆ.

**ವಾಹನ ಮಾಲೀಕರು:**

ಶ್ರೀ.ವಿಲಿಯಂ ಪಿಂಟೊ, ಬಿನ್: ಸಾಲ್ವದೋರ್ ಪಿಂಟೊ,
ಹುಣಸೆಕಟ್ಟೆ ಹೌಸ್, ಬೆಳ್ತಂಗಡಿ ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:24–5–2008 ರಂದು ಸಾಯಂಕಾಲ ಸುಮಾರು 3–45 ಗಂಟೆ ಸಮಯದಲ್ಲಿ ಫಿರ್ಯಾದುದಾರರು ಮತ್ತು ಸಿಬ್ಬಂದಿಯವರು ಬೆಳ್ತಂಗಡಿ ತಾಲ್ಲೂಕು ಪಡಂಗಡಿ ಗ್ರಾಮದ ಬದ್ಯಾರ್‌ನ ಕರ್ನಾಟಕ ಆಡಿಟೋರಿಯಂ ಎದುರುಗಡೆ ಅಕ್ರಮ ಮದ್ಯ ಸಾಗಾಟ ಮಾಡುತ್ತಿರುವ ಬಗ್ಗೆ ದೂರವಾಣಿ ಮುಖೇನ ದೊರೆತ ಖಚಿತ ವರ್ತಮಾನದ ಮೇರೆಗೆ ಸದರಿ ಸ್ಥಳಕ್ಕೆ ದಾಳಿ ನಡೆಸಿದಾಗ, ಇಲಾಖಾ ವಾಹನ ಹಾಗೂ ಸಮವಸ್ತ್ರದಲ್ಲಿದ್ದ ಸಿಬ್ಬಂದಿಗಳನ್ನು ಕಂಡ ಆಟೋರಿಕ್ಷಾದ ಚಾಲಕ ಹಿಂಬದಿಯ ಪೊದೆಯಲ್ಲಿ ಓಡಿ ಕಣ್ಮರೆಯಾದನು. ಸಿಬ್ಬಂದಿಗಳು ಆತನನ್ನು ಹಿಡಿಯಲು ಬೆನ್ನಟ್ಟಿದರೂ ಆರೋಪಿ ತಪ್ಪಿಸಿಕೊಂಡಿರುತ್ತಾನೆ. ನಂತರ ಸದರಿ ಆಟೋರಿಕ್ಷಾವನ್ನು ಪರಿಶೀಲಿಸಲು ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರಂಟ್ ಪಡೆಯಲು ಕಾಲಾವಕಾಶ ಇಲ್ಲದೇ ಇರುವುದರಿಂದ, ಸ್ಥಳದಲ್ಲಿಯೇ ಸರ್ಚ್ ಮೆಮೊವನ್ನು ತಯಾರಿಸಿ ಸದರಿ ಆಟೋರಿಕ್ಷಾವನ್ನು ಪರಿಶೀಲಿಸಿದಾಗ, ಸದರಿ ವಾಹನದ ನೋಂದಣಿ ಸಂಖ್ಯೆ: ಕೆಎ–21–1702 ಆಗಿದ್ದು, ಅದರ ಒಳಗಡೆ 3 ರಟ್ಟಿನ ಪೆಟ್ಟಿಗೆಗಳಿದ್ದು, ಒಂದನೇ ರಟ್ಟಿನ ಪೆಟ್ಟಿಗೆಯಲ್ಲಿ 180 ಎಂ.ಎಲ್.ನ 15 ಸೀಸೆಗಳಿರುವ ಹೈವೆ ನಂ.1 ವಿಸ್ಕಿ ಮತ್ತು ಎರಡನೇ ರಟ್ಟಿನ ಪೆಟ್ಟಿಗೆಯಲ್ಲಿ 180 ಎಂ.ಎಲ್.ನ 48 ಸೀಸೆಗಳಲ್ಲಿ ವನ್‌ಅಪ್ ವಿಸ್ಕಿ ಮತ್ತು ಮೂರನೇ ರಟ್ಟಿನ ಪೆಟ್ಟಿಗೆಯಲ್ಲಿ 180 ಎಂ.ಎಲ್.ನ 48 ವಿಂಡ್ಸರ್ ವಿಸ್ಕಿ ತುಂಬಿದ ಸೀಸೆಗಳಿರುವುದು ಪತ್ತೆಯಾದವು. 180 ಎಂ.ಎಲ್.ನ 111 ಸೀಸೆಗಳಲ್ಲಿ ಒಟ್ಟು 19–980 ಲೀಟರ್ ಮದ್ಯಗಳಿದ್ದವು. ಸದರಿ ಆಟೋರಿಕ್ಷಾವನ್ನು ಪರಿಶೀಲಿಸಲಾಗಿ, ಇದರ ಚಾಸೀಸ್ ಸಂಖ್ಯೆ ಕಾಣಿಸಿರುವುದಿಲ್ಲ ಮತ್ತು ಇಂಜೀನ್ ಸಂಖ್ಯೆ: 24–96ಬಿ80491 ಆಗಿದ್ದು, ನಂತರ ಸದರಿ ಪರಿಸರದಲ್ಲಿ ಪಂಚರ ಸಾಕ್ಷಿದಾರರನ್ನು ಹುಡುಕಲಾಗಿ, ಯಾರೂ ಪತ್ತೆಯಾಗದ ಕಾರಣ ಮದ್ಯದ ರಟ್ಟಿನ ಪೆಟ್ಟಿಗೆಯಿಂದ ರಾಸಾಯನಿಕ ಪರೀಕ್ಷೆಗಾಗಿ 9 ಸೀಸೆಗಳನ್ನು ತೆಗೆದು ಪ್ರತ್ಯೇಕಿಸಲಾಗಿ, ಅದಕ್ಕೆ ಬಟ್ಟೆದಾರ ಕಟ್ಟಿ ಅರಗು ಹಾಕಿ ಇಲಾಖಾ ಸೀಲ್‌ನಿಂದ ಮೊಹರು ಮಾಡಲಾಯಿತು. ಮಾದರಿ ಸೀಲನ್ನು ಸ್ಥಳದಲ್ಲಿಯೇ ತಯಾರಿಸಿ, ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 14, 15 ರ

ಪ್ರಕಾರ ಅಪರಾಧವಾಗಿದ್ದು, ಕಲಂ 32, 34, 38ಎ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ ಅಕ್ರಮವಾಗಿ ಸಾಗಾಟಕ್ಕೆ ಬಳಸಿದ ಮದ್ಯ ಮತ್ತು ಆಟೋರಿಕ್ಷಾವನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಮಹಜರನ್ನು ಸ್ಥಳದಲ್ಲಿಯೇ ಬರೆದು, ಓಡಿ ಹೋದ ಚಾಲಕನ ವಿರುದ್ಧ ತಕ್ಷೀರು ಸಂ:8/2008-09 ದಿ: 24-05-2008 ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಮಾನ್ಯ ನ್ಯಾಯಾಲಯಕ್ಕೂ ಹಾಗೂ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯ, ಬೆಳ್ತಂಗಡಿ ಇವರ ತನಿಖಾ ವರದಿ ಸಂಖ್ಯೆ: ಬಿಎಲ್‌ಡಿ/ಇಎಕ್ಸ್/ಸಿಆರ್‌ಎಂ /12/2008-09 ದಿ:25-9-2008 ರ ವರದಿಯಲ್ಲಿ ವಶಪಡಿಸಿಕೊಂಡಿರುವ ಮದ್ಯದ ಸೀಸೆಗಳಿಂದ 9 ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗಾಗಿ ದಿ:28-6-2008 ರಂದು ಕಳುಹಿಸಲಾಗಿದ್ದು, ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ವರದಿ ಸಂಖ್ಯೆ: ಇ-345-9 ದಿ:12-8-2008 ರ ವರದಿಯಲ್ಲಿ ಮದ್ಯದ ಮದ್ಯಸಾರ ಪ್ರಮಾಣ ಶೇ.43 ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ಬಜಾಜ್ ಆಟೋರಿಕ್ಷಾ ಸಂಖ್ಯೆ:ಕೆಎ-21-1702 ರ ಮಾಲೀಕತ್ವದ ಬಗ್ಗೆ ದಿ:26-5-2008 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಪುತ್ತೂರು ವಿಭಾಗ, ಪುತ್ತೂರು ಇವರಲ್ಲಿ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಪಡೆಯಲು ಸಂಪರ್ಕಿಸಿ, ಅವರು ದಿ:2-6-08 ರಂದು ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯನ್ನು ಸಲ್ಲಿಸಿರುತ್ತಾರೆ. ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯ ಪ್ರಕಾರ ಸದರಿ ವಾಹನವು ಬಜಾಜ್ ಆಟೋರಿಕ್ಷಾವಾಗಿದ್ದು, ಇದರ ನೋಂದಣಿ ಮಾಲೀಕ ಶ್ರೀ.ವಿಲಿಯಂ ಪಿಂಟೊ, ಬಿನ್: ಸಾಲ್ವದೋರ್ ಪಿಂಟೊ, ಹುಣಸೆಕಟ್ಟೆ ಹೌಸ್, ಬೆಳ್ತಂಗಡಿ ತಾಲ್ಲೂಕು ಎಂದು, ಇದರ ಚಾಸೀಸ್ ನಂ: 24ಎಫ್95ಎಲ್58724 ಮತ್ತು ಇಂಜೀನ್ ನಂ: 24ಎಂ95ಎಲ್58747 ಎಂದು ದೃಢೀಕರಣ ಪತ್ರ ನೀಡಿರುತ್ತಾರೆ. ಆದರೆ ವಶಪಡಿಸಿಕೊಂಡಿರುವ ಆಟೋರಿಕ್ಷಾದ ಚಾಸೀಸ್ ಸಂಖ್ಯೆ ಕಾಣಿಸದೇ ಇದ್ದು, ಇದರ ಇಂಜೀನ್ ನಂ: 24ಎಂ96ಬಿ80491 ಆಗಿರುತ್ತದೆ. ಇದರಿಂದ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯಲ್ಲಿ ನೀಡಿರುವ ಇಂಜೀನ್ ನಂಬರಿಗೂ ಹಾಗೂ ವಶಪಡಿಸಿಕೊಂಡಿರುವ ಇಂಜೀನ್ ನಂಬರಿಗೂ ಒಂದಕ್ಕೊಂದು ತಾಳೆ ಬರುವುದಿಲ್ಲ. ಆದುದರಿಂದ ವಶಪಡಿಸಿಕೊಂಡ ಆಟೋರಿಕ್ಷಾವು ನಕಲಿ ಸಂಖ್ಯೆಯಾಗಿರುತ್ತದೆ ಎಂದು ವರದಿ ಸಲ್ಲಿಸಿರುತ್ತಾರೆ ಹಾಗೂ ಬಿ ಅಬ್‌ಸ್ಟ್ರ್ಯಾಕ್ಟ್ ವರದಿಯಲ್ಲಿ ತೋರಿಸಿದ ನೋಂದಣಿ ಮಾಲೀಕರಿಗೆ ವಿವರಣೆಯನ್ನು ಸಲ್ಲಿಸಲು ದಿ:15-09-2008 ರಂದು ನೋಟೀಸು ಕಳುಹಿಸಲಾಗಿದ್ದು, ಆದರೆ ಯಾವುದೇ ವ್ಯಕ್ತಿಯು ಇದುವರೆಗೂ ತಮ್ಮ ಕಚೇರಿಯಲ್ಲಿ ಸಂಪರ್ಕಿಸಿರುವುದಿಲ್ಲವೆಂದು ಹಾಗೂ ಸದರಿ ವಾಹನವು ಅಕ್ರಮ ದಂಧೆಯಲ್ಲಿ ಭಾಗಿಯಾಗಿರುವುದು ಸ್ಪಷ್ಟವಾಗಿರುವುದರಿಂದ, ವಶಪಡಿಸಿಕೊಂಡ ಮದ್ಯ ಹಾಗೂ ಸಾಗಾಟಕ್ಕೆ ಬಳಸಿದ ಆಟೋರಿಕ್ಷಾವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯವನ್ನು ನಾಶಪಡಿಸಲು ಮತ್ತು ಆಟೋರಿಕ್ಷಾವನ್ನು ಬಹಿರಂಗ ಹರಾಜಿನಲ್ಲಿ ವಿಲೇವಾರಿ ಮಾಡಲು ಆದೇಶ ನೀಡಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಅಬಕಾರಿ ನಿರೀಕ್ಷಕರ ತನಿಖಾ ವರದಿಯನ್ನು ಆಧರಿಸಿ ಈ ಪ್ರಾಧಿಕಾರದ ಆದೇಶ ಸಂಖ್ಯೆ: ಎಸ್‌ಡಿಕೆ/413/ ಡಿಟಿಸಿಆರ್/ 2007-08 ದಿ:6-12-2008 ರಂದು ತಕ್ಷೀರಿನಲ್ಲಿ ವಶಪಡಿಸಿಕೊಂಡ ಬಜಾಜ್ ಆಟೋರಿಕ್ಷಾವನ್ನು ಹೊರತುಪಡಿಸಿ, ಉಳಿದ 19-980 ಲೀಟರ್ ಮದ್ಯವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ಮದ್ಯವನ್ನು ಸರಕಾರದ ಅಧಿಸೂಚನೆ ಸಂಖ್ಯೆ: ಎಫ್‌ಡಿ/06/ಪಿಐಎಸ್/2007 ದಿ:13-7-2007 ರಂತೆ ಮಾರಾಟ ಮಾಡಲು ನಿರ್ದೇಶಿಸಿದ್ದು, ಮುಟ್ಟುಗೋಲು ಹಾಕಿಕೊಳ್ಳಲಾದ ಸೊತ್ತುಗಳನ್ನು ನಾಶಪಡಿಸಲು ಆದೇಶಿಸಿರುವುದರಿಂದ, ಸದರಿ ಅಧಿಸೂಚನೆಯನ್ನು ಅನುಸರಿಸಿ ಕಲಂ 43ಎ(3) ರನ್ವಯ ಅಬಕಾರಿ ನಿರೀಕ್ಷಕರು, ಬೆಳ್ತಂಗಡಿ ವಲಯ, ಬೆಳ್ತಂಗಡಿ ಇವರ ಸಮಕ್ಷಮ ಅಬಕಾರಿ ಆಯುಕ್ತರು, ಕರ್ನಾಟಕ ರಾಜ್ಯ, ಬೆಂಗಳೂರು ಇವರ ಸುತ್ತೋಲೆ ಸಂಖ್ಯೆ: ಇಸಿಸಿ/73/ಸಿಆರ್‌ಎಂ/2004 ದಿ:12-9-2005 ರ ಮಾರ್ಗಸೂಚಿಗಳನ್ನು ಅನುಸರಿಸಿ ಮಹಜರು ಜರುಗಿಸಿ ಮದ್ಯವನ್ನು ನಾಶಪಡಿಸಲಾಗಿದೆ.

ಪ್ರಾದೇಶಿಕ ಸಾರಿಗೆ ಅಧಿಕಾರಿ, ಪುತ್ತೂರು ಇವರು ಸಲ್ಲಿಸಿದ ಬಿ ಅಬ್‌ಸ್ಟ್ರ್ಯಾಕ್ಟ್ ವರದಿ ಪ್ರಕಾರ ವಾಹನದ ನೋಂದಣಿ ಮಾಲೀಕರಾದ ಶ್ರೀ.ವಿಲಿಯಂ ಪಿಂಟೊ, ಬಿನ್: ಸಾಲ್ವದೋರ್ ಪಿಂಟೊ, ಹುಣಸೆಕಟ್ಟೆ ಹೌಸ್, ಬೆಳ್ತಂಗಡಿ ತಾಲ್ಲೂಕು ಮತ್ತು ಫೈನಾನ್ಸ್‌ರಾದ ಪ್ರವೀಣ್ ಫೈನಾನ್ಸ್ ಕಾರ್ಪೊರೇಶನ್, ದರ್ಭೆ, ಪುತ್ತೂರು ಇವರುಗಳಿಗೆ ಈ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43ಬಿ ಪ್ರಕಾರ ಕಾರಣ ಕೇಳಿ ನೋಟೀಸುಗಳನ್ನು ನೋಂದಣಿ ಅಂಚೆ ಮೂಲಕ ದಿ:6-12-2008 ಮತ್ತು ದಿ:18-2-2009 ರಂದು ನೀಡಲಾಗಿದ್ದು, ವಾಹನ ಮಾಲೀಕರಿಗೆ ನೀಡಲಾಗಿದ್ದ ನೋಟೀಸು ಜಾರಿಯಾಗದೆ ಹಿಂದೆ ಬಂದಿರುತ್ತದೆ. ಫೈನಾನ್ಸ್ ರವರಿಗೆ ನೀಡಿದ ನೋಟೀಸು ದಿನಾಂಕ: 26-2-2009 ರಂದು ಸ್ವೀಕೃತಿಯಾದ ಬಗ್ಗೆ ಸ್ವೀಕೃತಿ ರಶೀದಿ ಬಂದಿರುತ್ತದೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಾದಾಂಶಗಳು ಉದ್ಭವಿಸುತ್ತದೆ.

**1) ಮೊದಲನೇ ವಿವಾದಾಂಶ:** ದಿ:24-5-2008 ರಂದು ಆಟೋರಿಕ್ಷಾ ಸಂಖ್ಯೆ: ಕೆಎ-21-1702 ರಲ್ಲಿ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

**2) ಎರಡನೇ ವಿವಾದಾಂಶ:** ಸದರಿ ವಾಹನದಲ್ಲಿ ಅಕ್ರಮವಾಗಿ ಮದ್ಯ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿಗಳು ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

**3) ಮೂರನೇ ವಿವಾದಾಂಶ:** ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ, ಎರಡನೇ ಅಂಶವನ್ನು ನಕಾರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ: 1**

ಪ್ರಾಸಿಕ್ಯೂಶನ್ ಪರ ಪ್ರಕರಣದ ಮಹಜರು ಸಾಕ್ಷಿಯಾದ ಶ್ರೀ.ಅಮರನಾಥ.ಎಸ್.ಎಸ್. ಭಂಡಾರಿ, ಅಬಕಾರಿ ನಿರೀಕ್ಷಕರು, ಮಂಗಳೂರು ಉತ್ತರ ವಲಯ–2, ಮಂಗಳೂರು ಇವರು ದಿ:3–6–2009 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ.ಯವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ತಾನು ದಿ:20–02–2007 ರಿಂದ ದಿ:15–10–2008 ರವರೆಗೆ ಬಂಟ್ವಾಳ ಉಪ ವಿಭಾಗದಲ್ಲಿ ಅಬಕಾರಿ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ತನ್ನ ವ್ಯಾಪ್ತಿಗೆ ಬಂಟ್ವಾಳ ಹಾಗೂ ಬೆಳ್ತಂಗಡಿ ತಾಲೂಕುಗಳ ವ್ಯಾಪ್ತಿಗಳು ಒಳಗೊಂಡಿರುತ್ತದೆ. ತನಗೆ ಸಾಯಂಕಾಲ 3–45 ಗಂಟೆ ಸಮಯಕ್ಕೆ ತನಗೆ ದೊರೆತ ಖಚಿತ ವರ್ತಮಾನದ ಮೇರೆಗೆ ಬೆಳ್ತಂಗಡಿ ತಾಲ್ಲೂಕು ಪಡಂಗಡಿ ಗ್ರಾಮದ ಬದ್ಯಾರ್ ಎಂಬಲ್ಲಿಯ ಆಡಿಟೋರಿಯಂ ಎದುರುಗಡೆ ಆಟೋರಿಕ್ಷಾವೊಂದರಲ್ಲಿ ಒಬ್ಬ ವ್ಯಕ್ತಿಯು ಅಕ್ರಮ ಮದ್ಯ ಮಾರಾಟ ಮಾಡುತ್ತಿರುವ ಬಗ್ಗೆ ವರ್ತಮಾನ ದೊರೆತ್ತಿದ್ದು, ಸದರಿ ಸಮಯಕ್ಕೆ ತಮ್ಮ ಅಬಕಾರಿ ಉಪ ನಿರೀಕ್ಷಕರು ಮತ್ತು ಸಿಬ್ಬಂದಿಯವರೊಂದಿಗೆ ಸದರಿ ಸ್ಥಳಕ್ಕೆ ಧಾವಿಸಿ ದಾಳಿ ನಡೆಸಿದಾಗ, ಆಟೋರಿಕ್ಷಾದ ಬದಿಯಲ್ಲಿ ಒಬ್ಬ ವ್ಯಕ್ತಿಯು ನಿಂತಿರುವುದನ್ನು ದೂರದಿಂದಲೇ ಕಂಡು ರಿಕ್ಷಾದ ಹತ್ತಿರ ಸಮೀಪಿಸುತ್ತಿದ್ದಾಗ, ಇಲಾಖಾ ವಾಹನ ಹಾಗೂ ಸಮವಸ್ತ್ರದಲ್ಲಿ ತಮ್ಮನ್ನು ಕಂಡು ಆ ವ್ಯಕ್ತಿಯು ಓಡಿ ಹೋಗಿ ಪರಾರಿಯಾದನು. ಆತನನ್ನು ಹಿಡಿಯಲು ಪ್ರಯತ್ನಿಸಿದರೂ ಯಾವುದೇ ಪ್ರಯೋಜನವಾಗಿರುವುದಿಲ್ಲ. ಸದರಿ ಆಟೋರಿಕ್ಷಾವನ್ನು ಪರಿಶೀಲಿಸುವ ಮುನ್ನ ಮಾನ್ಯ ನ್ಯಾಯಾಲಯದಿಂದ ಯಾವುದೇ ಸರ್ಚ್ ವಾರಂಟ್ ಪಡೆಯಲು ತಮಗೆ ಸಮಯಾವಕಾಶ ದೊರೆಯದ ಕಾರಣ ಸ್ಥಳದಲ್ಲಿಯೇ ಸರ್ಚ್ ಮೊಮೆವನ್ನು ತಯಾರಿಸಿ ಆಟೋರಿಕ್ಷಾವನ್ನು ಪರಿಶೀಲಿಸಿದಾಗ, ಅದರ ನೋಂದಣಿ ಸಂಖ್ಯೆ: ಕೆಎ–21–1702 ಆಗಿರುತ್ತದೆ. ರಿಕ್ಷಾದಲ್ಲಿ 3 ರಟ್ಟಿನ ಪೆಟ್ಟಿಗೆಗಳಿದ್ದು, ಅದರಲ್ಲಿ 180 ಎಂ.ಎಲ್.ನ 111 ಸೀಸೆಗಳಲ್ಲಿ ಒಟ್ಟು 19–980 ಲೀಟರ್ ಮದ್ಯವಿರುವುದು ಕಂಡು ಬಂತು. ಇದು ಅಕ್ರಮ ಮದ್ಯವಾಗಿರುವುದರಿಂದ, ಮದ್ಯ ಹಾಗೂ ಸಾಗಾಟಕ್ಕೆ ಬಳಸಿದ ಆಟೋರಿಕ್ಷಾವನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ತನ್ನ ಅಬಕಾರಿ ಉಪ ನಿರೀಕ್ಷಕರು, ಬೆಳ್ತಂಗಡಿ ವಲಯ ಇವರು ಪ್ರಥಮ ಮಾಹಿತಿ ವರದಿಯನ್ನು ದಾಖಲಿಸಿ ಮಹಜರನ್ನು ಸ್ಥಳದಲ್ಲಿಯೇ ಬರೆದಿರುತ್ತಾರೆ. ಮಹಜರನ್ನು ನಿಶಾನೆ ಪಿ–1 ಎಂದು, ಅದರಲ್ಲಿರುವ ತನ್ನ ಸಹಿಯನ್ನು ನಿಶಾನೆ ಪಿ–1ಎ ಎಂದು ಗುರುತಿಸಲಾಯಿತು ಎಂದು ಸಾಕ್ಷಿ ನುಡಿದಿರುತ್ತಾರೆ. ವಾಹನದ ಪರ ವಾಹನ ಮಾಲೀಕರು ಹಾಗೂ ಅವರ ಪರ ವಕೀಲರು ಯಾರೂ ಹಾಜರಾಗದಿರದ ಪ್ರಯುಕ್ತ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಿ ಮೊಕದ್ದಮೆಯ ವಿಚಾರಣೆಯನ್ನು ನ್ಯಾಯಾಲಯದಲ್ಲಿ ಮುಕ್ತಾಯಗೊಳಿಸಲಾಯಿತು.

ಪ್ರಕರಣದ ಫಿರ್ಯಾದುದಾರರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿ:24–5–2008 ರಂದು ಜಪ್ತುಪಡಿಸಿಕೊಂಡಿರುವ ಆಟೋರಿಕ್ಷಾ ಸಂಖ್ಯೆ: ಕೆಎ–21–1702 ರಲ್ಲಿ ಅಕ್ರಮವಾಗಿ 19–980 ಲೀಟರ್ ಮದ್ಯವನ್ನು ಅಕ್ರಮ ಸಾಗಾಣಿಕೆಯಾಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ. ವಾಹನ ಮಾಲೀಕರು ಹಾಗೂ ಅವರ ಪರ ವಕೀಲರು ಯಾರೂ ಈ ಪ್ರಾಧಿಕಾರದ ಮುಂದೆ ವಾಹನಕ್ಕೆ ಸಂಬಂಧಿಸಿ ಯಾವುದೇ ಅರ್ಜಿ ಸಲ್ಲಿಸದೇ ಇರುವ ಕಾರಣಕ್ಕೆ ಎರಡನೇ ಅಂಶವನ್ನು ಗಣನೆಗೆ ತೆಗೆದುಕೊಳ್ಳುವ ಅಗತ್ಯತೆವಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು, ಅವುಗಳು ಕಾನೂನುಬದ್ದವಾಗಿದೆಯೆಂದು ಸಾಕ್ಷ್ಯಾಧಾರದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43 ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಾಲಂ 43(ಸಿ) ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಸದರಿ ಪ್ರಕರಣದಲ್ಲಿ ಅಬಕಾರಿ ಉಪ ನಿರೀಕ್ಷಕರು (ನಂ.1), ಬೆಳ್ತಂಗಡಿ ವಲಯ, ಬೆಳ್ತಂಗಡಿ ಇವರು ದಾಖಲಿಸಿರುವ ಪ್ರಕರಣದಲ್ಲಿ ಆರೋಪಿಗಳು ಅಕ್ರಮವಾಗಿ 19–980 ಲೀಟರ್ ಮದ್ಯವನ್ನು ಸಾಗಾಣಿಕೆ ಮಾಡುವಾಗ ವಾಹನವನ್ನು ಪಂಚನಾಮೆಯ ಮುಖಾಂತರ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತುಪಡಿಸಲಾಗಿರುವ ವಸ್ತು ರಾಸಾಯನಿಕ ತಜ್ಞರ ಅಭಿಪ್ರಾಯದಂತೆ ಮದ್ಯವೆಂದು ದೃಢಪಟ್ಟಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾ ಸಂಖ್ಯೆ:ಕೆಎ–21–1702 ನ್ನು ವಶಪಡಿಸಿಕೊಂಡು ಸುಮಾರು ಒಂದು ವರ್ಷ ಒಂದು ತಿಂಗಳು ಕಳೆದರೂ ಈ ಪ್ರಾಧಿಕಾರದ ಮುಂದೆ ಹಾಗೂ ತಕ್ಷೀರು ದಾಖಲಿಸಿದ ಬೆಳ್ತಂಗಡಿ ವಲಯ ಕಚೇರಿಯಲ್ಲಿ ಇದುವರೆಗೂ ವಾಹನದ ಬಿಡುಗಡೆಗಾಗಿ ವಾಹನ ಮಾಲೀಕರು ಹಾಗೂ ಓಡಿ ಹೋದ ಆರೋಪಿಯು ಕೂಡಾ ವಾಹನವು ತನ್ನದೆಂದು ಬಿಡುಗಡೆ ಅರ್ಜಿ ಸಲ್ಲಿಸಿರುವುದಿಲ್ಲ. ಇಂತಹ ಅಕ್ರಮ ಮದ್ಯ ಸಾಗಾಟ ತನ್ನ ತಿಳುವಳಿಕೆಗೆ ಬಾರದೆ ನಡೆದಿದೆ ಎಂಬುವುದನ್ನು ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸುವುದು ವಾಹನ ಮಾಲೀಕರ ಆದ್ಯ ಹೊಣೆಗಾರಿಕೆಯಾಗಿರುತ್ತದೆ. ಈ ಕಾರಣದಿಂದ ವಾಹನ ಮಾಲೀಕರು ಅವರ ವಾಹನದಲ್ಲಿ ಅಕ್ರಮವಾಗಿ ಮದ್ಯವನ್ನು ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ ಹಾಗೂ ವಾಹನ ಮಾಲೀಕರಿಗೆ ಈ ಪ್ರಾಧಿಕಾರದಿಂದ ಕಾರಣ ಕೇಳಿ ನೋಟೀಸು ಮತ್ತು ಹಾಜರಾತಿ ನೋಟೀಸುಗಳನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಅದು ಸ್ವೀಕೃತಿಯಾಗದೆ ಹಿಂದೆ ಬಂದಿರುವ ಕಾರಣದಿಂದ ವಾಹನ ಮಾಲೀಕರೇ ಸ್ವತ: ತನ್ನ ಆಟೋರಿಕ್ಷಾದಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ ಮದ್ಯವನ್ನು ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಹಾಗೂ ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾವು ಈಗಾಗಲೇ ಒಂದು ವರ್ಷ ಒಂದು ತಿಂಗಳು ಕಳೆದರೂ ಅದರ ಮಾಲೀಕತ್ವದ ಬಗ್ಗೆ ಯಾರೂ ಅರ್ಜಿಯನ್ನು ಸಲ್ಲಿಸದಿರುವ ಕಾರಣ, ಸರಕಾರದ ಆರ್ಥಿಕ ಹಿತದೃಷ್ಟಿಯಿಂದ ಅಕ್ರಮ ಮದ್ಯ ಸಾಗಾಟಕ್ಕೆ ಬಳಸಿದ ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 43ಎ ರಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುವುದರಿಂದ, ಈ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಆಟೋರಿಕ್ಷಾ ಸಂಖ್ಯೆ: ಕೆಎ–21–1702ನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/413/ಡಿಟಿಸಿಆರ್/2007–08, ದಿನಾಂಕ:20ನೇ ಜೂನ್, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ನಿಯಮ 43(ಬಿ) ರಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಅಬಕಾರಿ ಉಪ ನಿರೀಕ್ಷಕರು(ನಂ.1), ಬೆಳ್ತಂಗಡಿ ವಲಯ, ಬೆಳ್ತಂಗಡಿ ಇವರ ತಕ್ಷೀರು ಸಂ: 8/2008–09 ದಿ:24–5–2008 ರಲ್ಲಿ ಜಪ್ತುಪಡಿಸಿರುವ ನಕಲಿ ನೋಂದಣಿ ಸಂಖ್ಯೆಯ ಆಟೋರಿಕ್ಷಾ ಸಂಖ್ಯೆ:ಕೆಎ–21–1702 ನ್ನು ನಿಯಮ 43ಎ(2) ರನ್ವಯ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:20–06–2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

**ಪ್ರಾ.ಸಾ–1:** ಶ್ರೀ.ಅಮರನಾಥ.ಎಸ್.ಎಸ್. ಭಂಡಾರಿ, ಅಬಕಾರಿ ನಿರೀಕ್ಷಕರು, ಮಂಗಳೂರು ಉತ್ತರ ವಲಯ–2, ಮಂಗಳೂರು.

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

**ನಿಶಾನೆ ಪಿ–1** : ಮಹಜರ್ ಪ್ರತಿ

**ನಿಶಾನೆ ಪಿ–1ಎ** : ಮಹಜರ್ ಸಾಕ್ಷಿದಾರರ ಸಹಿ.

**ಅನುಬಂಧ–3**

**ವಾಹನ ಮಾಲೀಕರ ಪರ ವಿಚಾರಣೆಗೆ ಯಾರೂ ಹಾಜರಾಗಿರುವುದಿಲ್ಲ.**

**ಅನುಬಂಧ–4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು**

–ಇಲ್ಲ–

**ನೂರ್ ಮಹಮ್ಮದ್ ಹುಸೇನ್**
ಪಿ.ಆರ್.626
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ:** ಶ್ರೀ ಭಾಸ್ಕರ್ ಡಬ್ಲ್ಯೂ. ಪಾಟೀಲ್ ಸಾಧನ ಸಲಕರಣೆಗಳ ತಂತ್ರಜ್ಞ ಇವರ ಅನಧಿಕೃತ ಗೈರುಹಾಜರಿ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:** 1) ಜಿಲ್ಲಾ ಶಸ್ತ್ರಚಿಕಿತ್ಸಕರು ಜಿಲ್ಲಾ ಆಸ್ಪತ್ರೆ ಕೋಲಾರ ಇವರ ದೋಷಾರೋಪಣಾ ಪಟ್ಟಿ ನಂ. ಎಸ್.ಎನ್.ಆರ್. ಸಿಬ್ಬಂದಿ (1):91:97–98, ದಿನಾಂಕ:17.02.2007.

2) ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ: ಎಸ್.ಎನ್.ಆರ್. ಸಿಬ್ಬಂದಿ (1):91:05–06, ದಿನಾಂಕ:30.04.2008.

3) ವಿಚಾರಣಾ ವರದಿ ಸಂಖ್ಯೆ: ಎಸ್‌ಎನ್‌ಆರ್.ಸಿಬ್ಬಂದಿ(1): 91:05–06, ದಿನಾಂಕ:02.06.2008.

4) ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿರುವ ಪತ್ರ ಸಂಖ್ಯೆ: ಎಸ್‌ಎನ್‌ಆರ್.ಸಿಬ್ಬಂದಿ (1): 91:07–08, ದಿನಾಂಕ:17.10.2008.

5) ಕೋಲಾರ ಧ್ವನಿ ದಿನ ಪತ್ರಿಕೆ ಪ್ರಕಟಣೆ ದಿನಾಂಕ:19.11.2008 ಹಾಗೂ ಈ ಮುಂಜಾನೆ ದಿನ ಪತ್ರಿಕೆ ಪ್ರಕಟಣೆ ದಿನಾಂಕ:20.11.2008.

6) ಜಿಲ್ಲಾ ಶಸ್ತ್ರಚಿಕಿತ್ಸಕರು ಜಿಲ್ಲಾ ಆಸ್ಪತ್ರೆ ಕೋಲಾರ ಇವರ ಪತ್ರ ಸಂಖ್ಯೆ: ಎಸ್‌ಎನ್‌ಆರ್.ಸಿಬ್ಬಂದಿ (1): 91:97–98, ದಿನಾಂಕ:29.04.2009.

**ಪ್ರಸ್ತಾವನೆ:**

ಶ್ರೀ ಭಾಸ್ಕರ್ ಡಬ್ಲ್ಯೂ. ಪಾಟೀಲ್, ಸಾಧನ ಸಲಕರಣೆಗಳ ತಂತ್ರಜ್ಞ ಇವರು ಶ್ರೀ ನರಸಿಂಹರಾಜ ಜಿಲ್ಲಾ ಆಸ್ಪತ್ರೆ ಕೋಲಾರ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:21.06.2005 ರಿಂದ 20.08.2005ರ ವರೆಗೆ 61 ದಿನಗಳ ಪರಿವರ್ತಿತ ರಜೆಯನ್ನು ವೈದ್ಯಕೀಯ ಆಧಾರದ ಮೇಲೆ ಮಂಜೂರಾತಿ ಕೋರಿದ್ದು ಕಾರ್ಯಭಾರ ವಹಿಸಿರುವುದಿಲ್ಲ. ನಂತರ ಇವರಿಗೆ ಕರ್ತವ್ಯಕ್ಕೆ ಹಾಜರಾಗಲು ಮರುಕರೆ ನೋಟೀಸ್ ಕಳುಹಿಸಿದ್ದರೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಮೇಲೆ ಓದಲಾದ (1)ರಲ್ಲಿ ದೋಷಾರೋಪಣಾ ಪಟ್ಟಿ ಜಾರಿಗೊಳಿಸಿದ್ದು ನೌಕರರು ಅಹವಾಲು ಸಲ್ಲಿಸಿರುವುದಿಲ್ಲ. ಆದುದರಿಂದ ಪ್ರಕರಣದ ಸತ್ಯಾಸತ್ಯತೆ ಕಂಡುಕೊಳ್ಳಲು ಮೇಲೆ ಓದಲಾದ (2)ರ ಮೇರೆಗೆ ವಿಚಾರಣೆ ನಡೆಸಿ ಆರೋಪ ಸಾಭೀತಾಗಿದೆಯೆಂದು ಮೇಲೆ ಓದಲಾದ (3)ರಲ್ಲಿ ವಿಚಾರಣಾ ವರದಿ ಸಲ್ಲಿಸಿರುತ್ತಾರೆ. ಮೇಲೆ ಓದಲಾದ (4)ರಲ್ಲಿ ನೌಕರರಿಗೆ ವಿಚಾರಣಾ ವರದಿ ಜಾರಿಗೊಳಿಸಿದ್ದು ಪತ್ರ ವಾಪಸ್ಸು ಬಂದಿರುತ್ತದೆ. ಮೇಲೆ ಓದಲಾದ (5)ರಲ್ಲಿ ಎರಡು ಪತ್ರಿಕೆಗಳಲ್ಲಿ ಪ್ರಕಟಣೆ ನೀಡಿದ್ದರೂ ನೌಕರರು ಅಹವಾಲು ಸಲ್ಲಿಸಿರುವುದಿಲ್ಲ. ಹಾಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಆದುದರಿಂದ ಇವರ ವಿರುದ್ಧ ಕಠಿಣ ಕ್ರಮಕೈಗೊಳ್ಳಲು ಜಿಲ್ಲಾ ಶಸ್ತ್ರಚಿಕಿತ್ಸಕರು ಮೇಲೆ ಓದಲಾದ (6) ರಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ್ದು ನೌಕರರಿಗೆ ಸಾಕಷ್ಟು ಕಾಲಾವಕಾಶ ನೀಡಿದ್ದರೂ ಕರ್ತವ್ಯಕ್ಕೆ ಹಾಜರಾಗದೆ ಅಹವಾಲು ಸಲ್ಲಿಸಲು ವಿಫಲರಾಗಿರುತ್ತಾರೆ. ಸದರಿಯವರು ತಮಗೆ ನೀಡಿದ್ದ ನೈಸರ್ಗಿಕ ನ್ಯಾಯ ಪಡೆದುಕೊಳ್ಳಲು ವಿಫಲರಾಗಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್ (2): ಸಿಆರ್.8:2006–07, ಬೆಂಗಳೂರು, ದಿನಾಂಕ:13ನೇ ಜೂಲೈ, 2009**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಉಷಾ ವಾಸುನಕರ್, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀ ಭಾಸ್ಕರ್ ಡಬ್ಲ್ಯೂ. ಪಾಟೀಲ್, ಸಾಧನ ಸಲಕರಣೆಗಳ ತಂತ್ರಜ್ಞ, ಶ್ರೀ ನರಸಿಂಹರಾಜ, ಜಿಲ್ಲಾ ಆಸ್ಪತ್ರೆ, ಕೋಲಾರ ಇವರ ಅನಧಿಕೃತ ಗೈರುಹಾಜರಿಗೆ ದಂಡನೆಯಾಗಿ ಸದರಿ ನಿಯಮ 8(vii) ರ ಪ್ರಕಾರ ಸರ್ಕಾರಿ ಸೇವೆಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ವಜಾಗೊಳಿಸಿ ಆದೇಶಿಸಿರುತ್ತೇನೆ.

**ಡಾ: ಉಷಾ ವಾಸುನಕರ್**

ಪಿ.ಆರ್.661 ನಿರ್ದೇಶಕರು,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.

**ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಂಗಳೂರು (ಉತ್ತರ), ಯಶವಂತಪುರ, ಬೆಂಗಳೂರು–22, ಇವರ ಕಛೇರಿ ನಡಾವಳಿ**

**ಉಪಸ್ಥಿತರು:** ಶ್ರೀ ರುದ್ರಾ ನಾಯಕ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ತೆರಿಗೆ ಪ್ರಾಧಿಕಾರಿ ಮತ್ತು ನೋಂದಣಿ ಪ್ರಾಧಿಕಾರಿ, ಬೆಂಗಳೂರು (ಉತ್ತರ).

**ವಿಷಯ:** ವಾಹನ ಸಂಖ್ಯೆ: ಕೆಎ–02—8868 (Maxi Cab) ವಾಹನಕ್ಕೆ ತೆರಿಗೆ ವಿನಾಯಿತಿ ನೀಡಿ ನೋಂದಣಿ ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1) ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ರವರ ಪತ್ರ ದಿನಾಂಕ:10.01.2006.
2) ಈ ಕಛೇರಿಯ ನೋಟೀಸ್ ದಿನಾಂಕ:19.01.2006.
3) ಮೇಲ್ಮನವಿ ಸಂಖ್ಯೆ: ತೆರಿಗೆ 70/05–06
4) ಈ ಕಛೇರಿಯ ಹಿಂಬರಹ ದಿನಾಂಕ:06.11.2006.
5) ಮೇಲ್ಮನವಿ ಸಂಖ್ಯೆ: ತೆರಿಗೆ 13/ತೆರಿಗೆ/ 2006–07.
6) ಈ ಕಛೇರಿಯ ತಿಳುವಳಿಕೆ ಪತ್ರ ಸಂಖ್ಯೆ: ಪ್ರಾಸಾಅ/ಬೆಂ(ಉ)/ಸಿ–4/08–09, ದಿನಾಂಕ:22.12.2008.
7) ಮೋ.ವಾನಿ ವರದಿ ದಿನಾಂಕ:11.05.2009.
8) ಆರಕ್ಷಕ ಉಪ ನಿರೀಕ್ಷಕರು, ಮಾಗಡಿ ಪೊಲೀಸ್ ಠಾಣೆ ಇವರ ಪತ್ರ ಸಂಖ್ಯೆ: ಇ3ಪಿಎಸ್/ ಎಂಆರ್ಆರ್/ 175/2009, ದಿನಾಂಕ:30.04.2009.
9) ಈ ಕಛೇರಿಯ ಪತ್ರ ಸಂಖ್ಯೆ:ಪ್ರಾಸಾಅ/ಬೆಂ(ಉ)/ಸಾರಿಗೆ/ಕೆಎ–02–8868/2009–10, ದಿನಾಂಕ:2.6.2009.
10) ವಾಹನ ಮಾಲೀಕರ ಮನವಿ ದಿನಾಂಕ:22.06.2009.

**ಪ್ರಸ್ತಾವನೆ:**

ವಾಹನ ಸಂಖ್ಯೆ: ಕೆಎ–02—8868 (Maxi Cab)ರ ಮಾಲೀಕರು ಶ್ರೀ ಎಸ್.ಕೆ. ಗೋಪಿನಾಥ್ ಬಿನ್ ಎಸ್. ಕೃಷ್ಣರಾಜು, ನಂ.3, 15ನೇ ಕ್ರಾಸ್, 1ನೇ ಮೈನ್, ಬಿ.ಕೆ. ನಗರ, ಯಶವಂತಪುರ, ಬೆಂಗಳೂರು–22 ರಾಗಿದ್ದು, ಸದರಿ ವಾಹನಕ್ಕೆ ದಿನಾಂಕ:30.06.2004 ರವರೆಗೆ ತೆರಿಗೆ ಪಾವತಿಸಿದ್ದು, ಉಲ್ಲೇಖಿತ (1)ರ ಇನ್ಸೂರೆನ್ಸ್ ಕಂಪನಿ ಅವರ ಪತ್ರದಲ್ಲಿ ಈ ವಾಹನ ಸುಟ್ಟು ಹೋಗಿರುವುದರಿಂದ ಒಟ್ಟು ನಷ್ಟ ಎಂದು ಪರಿಗಣಿಸಿರುವುದಾಗಿ ತಿಳಿಸಿದ ಹಿನ್ನೆಲೆಯಲ್ಲಿ ಉಲ್ಲೇಖ (2)ರ ನೋಟೀಸ್‌ನಲ್ಲಿ ವಾಹನ ಮಾಲೀಕರಿಗೆ ದಿನಾಂಕ:01.07.2004 ರಿಂದ ಬಾಕಿ ಇರುವ ತೆರಿಗೆ ಪಾವತಿಸಿ ವಾಹನದ ಎಲ್ಲಾ ದಾಖಲಾತಿಗಳನ್ನು ನೋಂದಣಿ ರದ್ದುಗೊಳಿಸುವ ಬಗ್ಗೆ ಈ ಕಛೇರಿಗೆ ಸಲ್ಲಿಸಲು ತಿಳಿಸಲಾಗಿತ್ತು.

ಈ ಬಗ್ಗೆ ವಾಹನ ಮಾಲೀಕರು ಉಪ ಸಾರಿಗೆ ಆಯುಕ್ತರು, ಬೆಂಗಳೂರು ವಿಭಾಗ, ರವರಲ್ಲಿ ಅಪೀಲು ಸಂಖ್ಯೆ: 70/2006 ಅನ್ನು ಸಲ್ಲಿಸಲಾಗಿ ಸದರಿಯವರು ತಮ್ಮ ಆದೇಶ ದಿನಾಂಕ:06.04.2006ರಲ್ಲಿ ಆದೇಶ ನೀಡಿ ವಾಹನ ಮಾಲೀಕರು ಸಲ್ಲಿಸಿರುವ ದಾಖಲಾತಿಗಳನ್ನು ಪರಿಶೀಲಿಸಲಾಗಿ ಎಲ್ಲವೂ ಸತ್ಯವಾಗಿದ್ದು, ವಾಹನವು ಸಂಪೂರ್ಣ ಸುಟ್ಟುಹೋಗಿದ್ದು ಇದರ ಉಪಯೋಗ ಸಾಧ್ಯವಿಲ್ಲದ ಕಾರಣ ಇದರ ನೋಂದಣಿ ರದ್ದುಪಡಿಸುವಂತೆ ಕೋರಿರುವ ಹಿನ್ನೆಲೆಯಲ್ಲಿ ನೋಂದಣಿ ಪ್ರಾಧಿಕಾರವು ಸೂಕ್ತ ಕ್ರಮಕೈಗೊಳ್ಳಲು ಸೂಚಿಸಿ ಸದರಿ ಮನವಿ ಹಾಗೂ ನೋಟೀಸ್ ಅನ್ನು ರಿಮೇಂಡ್ ಮಾಡಿರುತ್ತಾರೆ. ಅಪೀಲ್‌ನೊಂದಿಗೆ ಸಲ್ಲಿಸಿರುವ ಮನವಿಯನ್ನು ಪರಿಶೀಲಿಸಲಾಗಿ ವಾಹನವು ದಿನಾಂಕ:20.04.2004ರಲ್ಲಿ ಮಾಗಡಿ ವಿಧಾನ ಸಭಾ ಕ್ಷೇತ್ರದ ಚುನಾವಣಾ ಸಮಯದಲ್ಲಿ ನಡೆದ ಗಲಭೆಯಲ್ಲಿ ಸುಟ್ಟು ಹೋಗಿರುವುದಾಗಿ ಈ ಬಗ್ಗೆ ಮಾಗಡಿ ಪೋಲಿಸ್ ಠಾಣೆಯಲ್ಲಿ ದೂರು ದಾಖಲಾಗಿದ್ದು, ಎಫ್.ಆರ್.ಐ. ನಂ.33/2004 ದಿನಾಂಕ:22.04.2004ರ ಪ್ರತಿಯನ್ನು ಸಲ್ಲಿಸಿರುತ್ತಾರೆ. ಹಾಗೂ ಈ ಬಗ್ಗೆ ಸ್ಥಳೀಯ ಪತ್ರಿಕೆಯಲ್ಲಿ ಪ್ರಕಟವಾದ ಪ್ರತಿ ಹಾಗೂ ಅಂದು ತೆಗೆಯಲಾದ ಫೋಟೋಗಳ ಪ್ರತಿಗಳನ್ನು ಸಹ ಸಲ್ಲಿಸಿರುತ್ತಾರೆ.

ಇವುಗಳನ್ನು ಪರಿಶೀಲಿಸಿ ದಿನಾಂಕ:06.11.2006ರಲ್ಲಿ ವಾಹನ ಮಾಲೀಕರು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಒಸಾಇ/170/ಟಿಎಂಎ/2003 ದಿನಾಂಕ:06.08.2003ರಂತೆ ಮೋಟಾರು ವಾಹನ ತೆರಿಗೆ ಕಾಯ್ದೆ 1987ರ ನಿಯಮ 34ಎ ರ ಅನ್ವಯ ನಿಗದಿಪಡಿಸಿದ ಶುಲ್ಕದೊಂದಿಗೆ ನಮೂನೆ 30ರಲ್ಲಿ ವಾಹನದ ಅನುಪಯೋಗದ ಬಗ್ಗೆ ಮಾಹಿತಿಯನ್ನು ಈ ಕಛೇರಿಗೆ ಸಲ್ಲಿಸದೆ ಇರುವುದರಿಂದ ದಿನಾಂಕ:01.07.2004 ರಿಂದ ಸರ್ಕಾರಕ್ಕೆ ಬರಬೇಕಾದ ತೆರಿಗೆಯನ್ನು ಪಾವತಿಸುವಂತೆ ಹಿಂಬರಹ ನೀಡಲಾಗಿತ್ತು. ಈ ಬಗ್ಗೆ ವಾಹನ ಮಾಲೀಕರು ಜಂಟಿ ಸಾರಿಗೆ ಆಯುಕ್ತರು, ಬೆಂಗಳೂರು (ನಗರ ಮತ್ತು ಗ್ರಾಮಾಂತರ) ಇವರಲ್ಲಿ ಅಪೀಲು ಸಂಖ್ಯೆ:13/ತೆರಿಗೆ 2006–07 ಸಲ್ಲಿಸಲಾಗಿದ್ದು, ಸದರಿಯವರ ಆದೇಶ ದಿನಾಂಕ:21.02.2007ರಲ್ಲಿ ಈ ರೀತಿ "The appeal is allowed and the impugned order of the Respondent Dated:06.11.2006 is set aside" ಆದೇಶ ನೀಡಿರುತ್ತಾರೆ.

ಈ ಕಛೇರಿಯ ದಿನಾಂಕ:11.03.2009ರ ಪತ್ರಕ್ಕೆ ಮಾಗಡಿ ಪೊಲೀಸ್ ಠಾಣೆಯವರು ಉಲ್ಲೇಖಿತ (8)ರ ಪತ್ರದಲ್ಲಿ ಸದರಿ ವಾಹನ ಸುಟ್ಟುಹೋಗಿರುವ ಬಗ್ಗೆ ಸಾಕ್ಷಿಗಾಗಿ ವಾಹನದ ಕೆಲವು ಭಾಗಗಳನ್ನು ನ್ಯಾಯಾಲಯದ ಮುಂದೆ ಹಾಜರುಪಡಿಸಲು ವಶಪಡಿಸಿಕೊಂಡಿರುವುದಾಗಿ ಹಾಗೂ ಈ ಪ್ರಕರಣದಲ್ಲಿ ಆರೋಪಿಗಳು ಪತ್ತೆಯಾಗದ ಕಾರಣ ನ್ಯಾಯಾಲಯಕ್ಕೆ "ಸಿ'' ಅಂತಿಮ ವರದಿ ಸಲ್ಲಿಸಿಕೊಂಡಿರುವುದಾಗಿ ತಿಳಿಸಿರುತ್ತಾರೆ.

ಇದರಿಂದಾಗಿ ವಾಹನ ಮಾಲೀಕರಿಗೆ ವಾಹನದ ನೋಂದಣಿ ರದ್ದುಗೊಳಿಸುವ ಕುರಿತು ವಾಹನದ ಎಲ್ಲಾ ದಾಖಲಾತಿಗಳನ್ನು ಈ ಕಛೇರಿಗೆ ಹಾಜರುಪಡಿಸಲು ದಿನಾಂಕ:02.06.2009ರ ಹಿಂಬರಹದಲ್ಲಿ ಸೂಚಿಸಲಾಗಿತ್ತು. ವಾಹನ ಮಾಲೀಕರು ದಿನಾಂಕ:22.06.2009ರಲ್ಲಿ ಈ ಕಛೇರಿಗೆ ಮನವಿ ಸಲ್ಲಿಸಿ ವಾಹನದ ಎಲ್ಲಾ ದಾಖಲಾತಿಗಳು ಮೇಲ್ಕಂಡ

ಘಟನೆಯಲ್ಲಿ ಕಳೆದು ಹೋಗಿರುವುದರಿಂದ ನಕಲು ನೋಂದಣಿ ಶುಲ್ಕ ಪಾವತಿಸಿ ನಕಲು ನೋಂದಣಿ ಕೋರಿ ಅರ್ಜಿ ಸಲ್ಲಿಸಿ ವಾಹನ ನೋಂದಣಿ ರದ್ದುಗೊಳಿಸುವಂತೆ ಕೋರಿರುತ್ತಾರೆ.

ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಗಣಿಸಿ ದಿನಾಂಕ:01.07.2004 ರಿಂದ 30.06.2009 ರವರೆಗೆ ತೆರಿಗೆ ವಿನಾಯಿತಿ ನೀಡಿ ವಾಹನದ ನೋಂದಣಿ ರದ್ದುಗೊಳಿಸುವ ಬಗ್ಗೆ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಪ್ರಾ.ಸಾ.ಅ./ಬೆಂ(ಉ)/ಕೆಎ–02–8868/09–10, ದಿನಾಂಕ:29ನೇ ಜೂನ್, 2009**

ಕರ್ನಾಟಕ ಮೋಟಾರು ವಾಹನ ತೆರಿಗೆ ಕಾಯ್ದೆ 1957ರ ವಿಧಿ 16 ಹಾಗೂ ಕೇಂದ್ರ ಮೋಟಾರು ವಾಹನ ಕಾಯ್ದೆ 1988ರ ವಿಧಿ 55(2)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ರುದ್ರಾನಾಯಕ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ತೆರಿಗೆ ಪ್ರಾಧಿಕಾರಿ ಮತ್ತು ನೋಂದಣಿ ಪ್ರಾಧಿಕಾರಿ ಆದ ನಾನು, ಮೇಲ್ಕಂಡ ಎಲ್ಲಾ ಕಾರಣಗಳಿಂದಾಗಿ, ಕ್ರಮವಾಗಿ ವಾಹನವು ದಹನವಾದ ದಿನದಿಂದ ಇದು ರಸ್ತೆಯ ಮೇಲೆ ಉಪಯೋಗಿಸಲು ಸಾಧ್ಯವಿಲ್ಲವೆಂದು ಪರಿಗಣಿಸಿ ಉಪ ಸಾರಿಗೆ ಆಯುಕ್ತರು, ಬೆಂಗಳೂರು ವಿಭಾಗ ಮತ್ತು ಜಂಟಿ ಸಾರಿಗೆ ಆಯುಕ್ತರು, ಬೆಂಗಳೂರು (ನಗರ ಮತ್ತು ಗ್ರಾಮಾಂತರ) ಇವರ ಆದೇಶವನ್ನು ಸಹ ಪರಿಗಣಿಸಿ ಮೋಟಾರು ವಾಹನ ಸಂಖ್ಯೆ: ಕೆಎ–02–8868 (Maxi Cab)ರ ವಾಹನಕ್ಕೆ ದಿನಾಂಕ:01.07.2004 ರಿಂದ 30.06.2009 ರವರೆಗೆ ಬಾಕಿ ಇರುವ ತೆರಿಗೆಯನ್ನು ಮನ್ನಾ ಮಾಡಿ, ಈ ವಾಹನದ ಮೇಲೆ ಇನ್ನೂ ಮುಂದೆ ಏನಾದರೂ ತೆರಿಗೆ, ಆಡಿಟ್, ಇಲಾಖಾ ಪ್ರಕರಣಗಳು ಬಾಕಿ ಇರುವುದು ಕಂಡು ಬಂದ್ದಲ್ಲಿ ವಾಹನದ ಮಾಲೀಕರೇ ಪಾವತಿಸಬೇಕೆಂಬ ನಿಬಂಧನೆಯೊಂದಿಗೆ ಸದರಿ ವಾಹನದ ನೋಂದಣಿಯನ್ನು ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು**

| | | |
|---|---|---|
| 1. | ಮೋಟಾರು ವಾಹನ ಸಂಖ್ಯೆ | KA-02-8868 (Maxi Cab) |
| 2. | ವಾಹನದ ತಯಾರಕನ ಹೆಸರು | Bajaj Tempo Ltd., |
| 3. | ವಾಹನದ ಮಾದರಿ | Saloon |
| 4. | ವಾಹನ ತಯಾರಿಕೆ ವರ್ಷ | 1995 |
| 5. | ಚಾಸೀಸ್ ಸಂಖ್ಯೆ | TF 804649 M 94 |
| 6. | ಇಂಜಿನ್ ಸಂಖ್ಯೆ | 616 969 113543 |
| 7. | ಅಶ್ವಶಕ್ತಿ | 72 HP |
| 8. | ಆಸನ ಸಾಮರ್ಥ್ಯ | 12+1 |
| 9. | ಮಾಲೀಕರ ಹೆಸರು ಮತ್ತು ವಿಳಾಸ | ಶ್ರೀ ಎಸ್.ಕೆ. ಗೋಪಿನಾಥ್ ಬಿನ್ ಎಸ್. ಕೃಷ್ಣರಾಜು, ನಂ.3, 15ನೇ ಕ್ರಾಸ್, 1ನೇ ಮೈನ್, ಬಿ.ಕೆ.ನಗರ, ಯಶವಂತಪುರ, ಬೆಂಗಳೂರು–22. |

**ರುದ್ರಾ ನಾಯಕ್**
ಪ್ರಾದೇಶಿಕ ಸಾರಿಗೆ ಅಧಿಕಾರಿ,
ಬೆಂಗಳೂರು (ಉತ್ತರ).

ಪಿ.ಆರ್.646

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ಕರ್ನಾಟಕ ರಾಜ್ಯ ನಂ.1, ಅಲಿ ಅಸ್ಕರ್ ರಸ್ತೆ, ಬೆಂಗಳೂರು–52**

**ಯುಬಿಸಿ–3/63/ಸಮಾಪನೆ/2009–10, ದಿನಾಂಕ:10ನೇ ಜುಲೈ, 2009**

**ವಿಷಯ:** ದಿ. ಕಟಕೋಳ ಕೋ–ಆಪರೇಟಿವ್ ಬ್ಯಾಂಕ್ ಲಿ., ಕಟಕೋಳ, ರಾಮದುರ್ಗ ತಾಲ್ಲೂಕು, ಬೆಳಗಾವಿ ಜಿಲ್ಲೆ ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72ಎ ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಕಾರ್ಯನಿರ್ವಾಹಕ ನಿರ್ದೇಶಕರು, ಭಾರತೀಯ ರಿಸರ್ವ್ ಬ್ಯಾಂಕ್, ಮುಂಬಯಿ ಇವರ ಆದೇಶ ಸಂಖ್ಯೆ: ಯುಬಿಡಿ, ನಂ.ಸಿಓ. ಬಿಎಸ್‌ಡಿ. ಎನ್‌ಎಸ್‌ಬಿ1. ಎಲ್‌ಸಿ/29/12.23..058/2008–09, ದಿನಾಂಕ:24.06.2009.

2) ಕಾರ್ಯನಿರ್ವಾಹಕ ನಿರ್ದೇಶಕರು, ಭಾರತೀಯ ರಿಸರ್ವ್ ಬ್ಯಾಂಕ್, ಮುಂಬಯಿ ಇವರ ಆದೇಶ ಸಂಖ್ಯೆ: ಯುಬಿಡಿ.ಸಿಓ.ಬಿಎಸ್‌ಡಿ. ಎನ್‌ಎಸ್‌ಬಿ 1.ಆರ್‌ಎಲ್‌ಸಿ/29/12.23..058/2008–09, ದಿನಾಂಕ:24.06.2009.

**ಪ್ರಸ್ತಾವನೆ:**

ದಿ. ಕಟಕೋಳ ಕೋ–ಆಪರೇಟಿವ್ ಬ್ಯಾಂಕ್ ಲಿ. ಕಟಕೋಳ, ರಾಮದುರ್ಗ ತಾಲ್ಲೂಕು ಬೆಳಗಾವಿ ಜಿಲ್ಲೆ ಇದು ತೀವ್ರ ಆರ್ಥಿಕ ಸಂಕಷ್ಟದಲ್ಲಿದ್ದು ಬ್ಯಾಂಕಿಂಗ್ ನಿಯಂತ್ರಣ ಕಾಯ್ದೆ 1949 (ಎಎಸಿಎಸ್)ರ ಕಲಂ 11(1), 22(3)(ಎ) ಮತ್ತು 22(3)(ಬಿ)ಗಳನ್ನು ಪಾಲಿಸಲು ಮತ್ತು ಠೇವಣಿದಾರರ ಠೇವಣಿಯನ್ನು ಹಿಂತಿರುಗಿಸಲು ವಿಫಲವಾಗಿದ್ದು ಸಾರ್ವಜನಿಕ ಹಿತಾಸಕ್ತಿಗೆ ವಿರುದ್ಧವಾಗಿ ಕೆಲಸ ಮಾಡುತ್ತಿದ್ದು ಹೀಗೆ ಮುಂದುವರಿದಲ್ಲಿ ಠೇವಣಿದಾರರ ಹಿತಾಸಕ್ತಿಗೆ ಧಕ್ಕೆ ಉಂಟಾಗುವುದರಿಂದ ಉಲ್ಲೇಖ (1)ರ ಆದೇಶದಲ್ಲಿ ಬ್ಯಾಂಕಿಂಗ್ ವ್ಯವಹಾರ ನಡೆಸಲು ನೀಡಿದ್ದ ಪರವಾನಿಗೆಯನ್ನು ಭಾರತೀಯ ರಿಸರ್ವ್ ಬ್ಯಾಂಕ್ ರದ್ದುಗೊಳಿಸಿದೆ. ಉಲ್ಲೇಖ (2)ರ ಆದೇಶದಲ್ಲಿ ಸಹಕಾರ ಸಂಘಗಳ ಕಾಯ್ದೆ ಕಲಂ 72ಎ ರಡಿ ಬ್ಯಾಂಕಿನ ಸಮಾಪನೆಗೆ ಆದೇಶಿಸುವಂತೆ ತಿಳಿಸಿರುವುದರ ಮೇರೆಗೆ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72ಎ ರಡಿಯಲ್ಲಿ ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಇವರಿಗೆ ದತ್ತವಾದ ಅಧಿಕಾರದನ್ವಯ ದಿ ಕಟಕೋಳ ಕೋ–ಆಪರೇಟಿವ್ ಬ್ಯಾಂಕ್ ಲಿ., ಕಟಕೋಳ ಇದನ್ನು ಸಮಾಪನೆಗೊಳಿಸಿ ಕಲಂ 73(1) ರನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೈಲಹೊಂಗಲ ಉಪವಿಭಾಗ ಇವರನ್ನು ಸಮಾಪನಾಧಿಕಾರಿಯನ್ನಾಗಿ ಹೆಚ್ಚುವರಿ ಪ್ರಭಾರದಲ್ಲಿ ನೇಮಿಸಲಾಗಿದೆ.

ಸಮಾಪನಾಧಿಕಾರಿಯವರು ಕೂಡಲೇ ಬ್ಯಾಂಕಿನ ಪ್ರಭಾರ ವಹಿಸಿಕೊಂಡು ಈ ಕಛೇರಿಗೆ ವರದಿ ಮಾಡುವುದು ಮತ್ತು ಸಹಕಾರ ಸಂಘಗಳ ಕಾಯ್ದೆ, ನಿಯಮ ಮತ್ತು ಈ ಕಛೇರಿಯ ನಿರ್ದೇಶನ, ಸುತ್ತೋಲೆಗಳಿಗೆ ಅನುಸಾರವಾಗಿ ಬ್ಯಾಂಕಿನ ಆಸ್ತಿ–ಜವಾಬ್ದಾರಿಗಳ ವಿಲೇವಾರಿಗೆ ಕ್ರಮ ತೆಗೆದುಕೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ದಿನಾಂಕ:10.07.2009ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

ಪಿ.ಆರ್.650

## ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಭದ್ರಾವತಿ ವಿಭಾಗ, ಭದ್ರಾವತಿ

### ಅಧಿಸೂಚನೆ

**ಸಂಖ್ಯೆ: ಎ3–ಸಿಓಎನ್–ಸಿಆರ್–10/2009–10, ದಿನಾಂಕ:17ನೇ ಜುಲೈ, 2009**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಅರಣ್ಯ ಅಪರಾಧ ಪ್ರಕರಣ ಸಂಬಂಧ ಕೆಳಕಂಡ ವಾಹನಗಳನ್ನು ತರೀಕೆರೆ ವಲಯದ ಲಿಂಗದಹಳ್ಳಿ ಶಾಖೆಯ ವನಪಾಲಕರು ಹಾಗೂ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್–71(ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ.

| ಕ್ರ. ಸಂ. | ಮೊಕದ್ದಮೆ ಸಂಖ್ಯೆ | ವಾಹನಗಳ ವಿವರ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | ತರೀಕೆರೆ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ:39/ 2009–10, ದಿನಾಂಕ:08.07.2009 | ಒಂದು ಸುಜುಕಿ ಸಮುರಾಯ್ ಬೈಕ್ ಸಂಖ್ಯೆ: ಕೆಎ–14–ಹೆಚ್–546 ಹಾಗೂ ಸಾಗುವಾನಿ ಜಾತಿಯ ಸೈಜು 1=0.047 ಎಂ3 | 7308M405210 | 7308F374049 |

ಈ ಮೇಲ್ಕಂಡ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕು ಬಾಧ್ಯತೆಗಳನ್ನು ಈ ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದಕ್ಕಾಗಿ ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ಈ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಎಸ್. ವೆಂಕಟೇಸನ್**
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಭದ್ರಾವತಿ ವಿಭಾಗ, ಭದ್ರಾವತಿ.

ಪಿ.ಆರ್.686

## ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಬಳ್ಳಾರಿ

## ಪ್ರಕಟಣೆ

**ಸಂಖ್ಯೆ: ಜಿಸಕಅ/ಎಸ್–6/ಕಾ.ಪ.ತ/ಸಿಆರ್–/09–10, ದಿನಾಂಕ:17ನೇ ಜುಲೈ, 2009**

**ವಿಷಯ:** 2009–10ನೇ ಸಾಲಿನಲ್ಲಿ ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡಲು ಅರ್ಜಿಗಳನ್ನು ಆಹ್ವಾನಿಸುವುದರ ಕುರಿತು.

**ಉಲ್ಲೇಖ:**1)ಸರ್ಕಾರದ ಆದೇಶ ಸಂಖ್ಯೆ: ಎಸ್.ಡಬ್ಲ್ಯೂ.ಎಸ್–681/ಎಸ್.ಡಬ್ಲ್ಯೂ–89, ಬೆಂಗಳೂರು ದಿನಾಂಕ: 02.11.1990.

2) ಸರ್ಕಾರದ ಆದೇಶ ಸಂಖ್ಯೆ: ಸ.ಕ.ಇ.–421/ಪಕವಿ–95, ಬೆಂಗಳೂರು, ದಿನಾಂಕ:29.07.1997.

3) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಸ.ಕ.ಇ/ಸಮನ್ವಯ. 6/ ಸಿಆರ್–14/97–98, ದಿನಾಂಕ:07.08.1997 ಮತ್ತು 14.10.1997.

4) ಸರ್ಕಾರದ ಆದೇಶ ಸಂಖ್ಯೆ: ಸಕ.ಇ–535/ಸಕನಿ–2000, ಬೆಂಗಳೂರು, ದಿನಾಂಕ:28.03.2001.

5) ಸರ್ಕಾರಿ ಆದೇಶ ಸಂಖ್ಯೆ: ಸಕಇ–349/ಪಕವಿ–05, ದಿನಾಂಕ:28.01.2006.

ಬಳ್ಳಾರಿ ಜಿಲ್ಲೆಯಲ್ಲಿರುವ ಪರಿಶಿಷ್ಟ ವರ್ಗಕ್ಕೆ ಸೇರಿರುವ ಕಾನೂನು ಪದವೀಧರರಿಗೆ 2009–10ನೇ ಸಾಲಿಗೆ ಆಡಳಿತ ನ್ಯಾಯಾಧೀಕರಣದಲ್ಲಿ 4 ವರ್ಷಗಳ ತರಬೇತಿಯನ್ನು ನೀಡುವ ಸಲುವಾಗಿ ಅರ್ಹ ಪರಿಶಿಷ್ಟ ವರ್ಗದ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಈ ತರಬೇತಿಯನ್ನು ಪಡೆಯಲು ಇಚ್ಛಿಸುವ ಪರಿಶಿಷ್ಟ ವರ್ಗದ ಅಭ್ಯರ್ಥಿಗಳು ಈ ಕೆಳಕಂಡ ಅರ್ಹತೆಯನ್ನು ಕಡ್ಡಾಯವಾಗಿ ಹೊಂದಿರತಕ್ಕದ್ದು.

1) ಅಭ್ಯರ್ಥಿಗಳು ಪರಿಶಿಷ್ಟ ವರ್ಗಕ್ಕೆ ಸೇರಿದವರಾಗಿರಬೇಕು.

2) ಬಳ್ಳಾರಿ ಜಿಲ್ಲೆಗೆ ಮಾತ್ರ ಸಂಬಂಧಿಸಿದ ಹಾಗೂ ವಕೀಲ ವೃತ್ತಿ ನಡೆಸಲು ಅರ್ಹತೆಯುಳ್ಳ ಕಾನೂನು ಪದವೀಧರರು ಮಾತ್ರ ಈ ತರಬೇತಿಗೆ ಅರ್ಹರು.

3) ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ 2 ವರ್ಷದೊಳಗೆ ಕಾನೂನು ಪದವಿಯನ್ನು ಪಡೆದಿರಬೇಕು. (ಅರ್ಜಿಯೊಂದಿಗೆ ಕಾನೂನು ಪದವಿಯ 3 ವರ್ಷದ ಅಂಕಪಟ್ಟಿಗಳ ಜೆರಾಕ್ಸ್ ಪ್ರತಿಗಳನ್ನು ಸಲ್ಲಿಸತಕ್ಕದ್ದು.

4) ಅಭ್ಯರ್ಥಿಯ ವಯಸ್ಸು, ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕದಂದು 35 ವರ್ಷಗಳನ್ನು ಮೀರಿರಬಾರದು. ಈ ಕುರಿತು ಅಧಿಕೃತ ಪ್ರಮಾಣ ಪತ್ರ (ಎಸ್.ಎಸ್.ಎಲ್.ಸಿ.) ಅಂಕಪಟ್ಟಿ ಪ್ರತಿ ಲಗತ್ತಿಸಬೇಕು.

5) ಈ ತರಬೇತಿಗೆ ಅರ್ಜಿಯನ್ನು ಸಲ್ಲಿಸಲು ಇಚ್ಛಿಸುವ ಅಭ್ಯರ್ಥಿಗಳು ಅರ್ಜಿಗಳನ್ನು ದ್ವಿಪ್ರತಿಗಳಲ್ಲಿ ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಎಲ್ಲಾ ಪರೀಕ್ಷೆಗಳ ಅಂಕಪಟ್ಟಿಗಳ ಜೆರಾಕ್ಸ್ ಮತ್ತು ಜಾತಿ ಪ್ರಮಾಣ ಪತ್ರ, ಬಾರ್ ಕೌನ್ಸಿಲ್‌ನಲ್ಲಿ ನೊಂದಣಿ ಮಾಡಿದ ಪ್ರಮಾಣ ಪತ್ರದ ದೃಢೀಕೃತ ಪ್ರತಿಗಳೊಂದಿಗೆ ಸಲ್ಲಿಸಬೇಕು.

6) ಈಗಾಗಲೇ ಕಾನೂನು ವಿಷಯದಲ್ಲಿ ಯಾವುದಾದರೂ ತರಬೇತಿ ಪಡೆದಿರಬಾರದು.

**ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು**

1) ಈ ತರಬೇತಿಗೆ ಪ.ವರ್ಗದ 15 ಅಭ್ಯರ್ಥಿಗಳನ್ನು ಮಾತ್ರ ಆಯ್ಕೆ ಮಾಡಲಾಗುವುದು.

2) ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ನ್ಯಾಯಾಂಗ ಆಡಳಿತ ತರಬೇತಿಯನ್ನು ಸರ್ಕಾರಿ ವಕೀಲರು ಪಬ್ಲಿಕ್ ಪ್ರಾಸಿಕ್ಯೂಟರ್ ಅಥವಾ 20 ವರ್ಷಗಳ ಅನುಭವ ಹೊಂದಿರುವ ಹಿರಿಯ ವಕೀಲರಲ್ಲಿ ನೀಡಲಾಗುವುದು. ಈ ವಿಷಯದ ಬಗ್ಗೆ ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮವಾದದ್ದು.

3) ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾಹೆಯಾನ ರೂ.1,000/– (ರೂ. ಒಂದು ಸಾವಿರ ಮಾತ್ರ) 4 ವರ್ಷದವರೆಗೂ ಸ್ಟೈಫಂಡ್ ನೀಡಲಾಗುವುದು.

4) ಈ ತರಬೇತಿಗೆ ಅಭ್ಯರ್ಥಿಗಳನ್ನು ಮಾನ್ಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಬಳ್ಳಾರಿ ಇವರ ಅಧ್ಯಕ್ಷತೆಯಲ್ಲಿ ರಚಿತವಾದ ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯ ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು.

5) ಆಯ್ಕೆಯಾದ ಅಭ್ಯರ್ಥಿಗಳು ತರಬೇತಿಯನ್ನು ಮಧ್ಯದಲ್ಲಿ ಬಿಟ್ಟುಹೋಗಬಾರದು (ಕೇಂದ್ರ/ರಾಜ್ಯ ಸರ್ಕಾರದಲ್ಲಿ ಉದ್ಯೋಗ ದೊರೆತ ಅಭ್ಯರ್ಥಿಗಳಿಗೆ ಈ ನಿಬಂಧನೆ ಅನ್ವಯಿಸುವುದಿಲ್ಲ).

6) ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಮಾಹಿತಿ ದಾಖಲೆ ಒದಗಿಸಿದ್ದಲ್ಲಿ, ಅಂತಹವರನ್ನು ಕಾನೂನಿನ ಶಿಸ್ತಿನ ಕ್ರಮಕ್ಕೆ ಒಳಪಡಿಸಲಾಗುವುದು. ಹಾಗೂ ತರಬೇತಿಯನ್ನು ಮಧ್ಯದಲ್ಲಿ ಬಿಟ್ಟುಹೋದಲ್ಲಿ, ಅಂತಹವರಿಗೆ ನೀಡಿದ ಸ್ಟೈಫಂಡ್ ಹಣವನ್ನು ಶೇ.10 ರಷ್ಟು ಬಡ್ಡಿ ಸೇರಿಸಿ, ಭೂ ಕಂದಾಯ ಬಾಕಿ ಎಂದು ಪರಿಗಣಿಸಿ, ವಸೂಲಿ ಮಾಡಲಾಗುವುದು. ಈ ಬಗ್ಗೆ ಆಯ್ಕೆಯಾದ ಅಭ್ಯರ್ಥಿಗಳು ಕರಾರು ಪತ್ರವನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ಬರೆದುಕೊಡತಕ್ಕದ್ದು.

7) ಸಂದರ್ಶನದಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾತ್ರ ಈ ಕಛೇರಿಯಿಂದ ತಿಳಿಸಲಾಗುವುದು. ಹಾಗೂ ತರಬೇತಿ ಪಡೆಯಲು ಆಯ್ಕೆಯಾದ ಅಭ್ಯರ್ಥಿಗಳು ಆಯ್ಕೆ ಪತ್ರ ತಲುಪಿದ 15 ದಿನಗಳೊಳಗಾಗಿ ತಮ್ಮ ಒಪ್ಪಿಗೆ ಪತ್ರವನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ಸಲ್ಲಿಸತಕ್ಕದ್ದು.

8) ಪೂರ್ಣ ಭರ್ತಿ ಮಾಡಿದ ಅರ್ಜಿಗಳನ್ನು (ದ್ವಿ ಪ್ರತಿಗಳಲ್ಲಿ) ಕಾರ್ಯದರ್ಶಿಗಳು, ಜಿಲ್ಲಾ ಮಟ್ಟದ ನ್ಯಾಯಾಂಗ ತರಬೇತಿ ಆಯ್ಕೆ ಸಮಿತಿ ಮತ್ತು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ದಿನಾಂಕ:30.09.2009 ರಂದು ಸಾಯಂಕಾಲ 5.30 ಗಂಟೆಯೊಳಗೆ ಸಲ್ಲಿಸತಕ್ಕದ್ದು.

9) ಅಪೂರ್ಣ ಮಾಹಿತಿ ಸಲ್ಲಿಸಿದ ಹಾಗೂ ಅನರ್ಹ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಹಕ್ಕು ಆಯ್ಕೆ ಸಮಿತಿಗೆ ಇರುತ್ತದೆ.

**ಸೂಚನೆ:** ಅರ್ಜಿಗಳನ್ನು ಮತ್ತು ಹೆಚ್ಚಿನ ಮಾಹಿತಿಯನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಬಳ್ಳಾರಿ ಹಾಗೂ ಸಂಬಂಧಪಟ್ಟ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಿಂದ ಪಡೆಯತಕ್ಕದ್ದು.

**ಎಂ.ವಿ. ಶ್ರೀನಿವಾಸುಲು**

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಹಾಗೂ ಸದಸ್ಯ ಕಾರ್ಯದರ್ಶಿ,
ಕಾನೂನು ಪದವೀಧರರ ನ್ಯಾಯಾಂಗ ಆಡಳಿತ ತರಬೇತಿ ಆಯ್ಕೆ ಸಮಿತಿ, ಬಳ್ಳಾರಿ.

**ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಬಳ್ಳಾರಿ**

**ಪ್ರಕಟಣೆ**

**ಸಂಖ್ಯೆ: ಜಿಸಕಅ/ಎಸ್–6/ಕಾ.ಪ.ತ/ಸಿಆರ್–/09–10/504, ದಿನಾಂಕ: ಜುಲೈ, 2009**

**ವಿಷಯ:** 2009–10ನೇ ಸಾಲಿನಲ್ಲಿ ಪರಿಶಿಷ್ಟ ಜಾತಿಯ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡಲು ಅರ್ಜಿಗಳನ್ನು ಆಹ್ವಾನಿಸುವುದರ ಕುರಿತು.

**ಉಲ್ಲೇಖ:**1)ಸರ್ಕಾರದ ಆದೇಶ ಸಂಖ್ಯೆ: ಎಸ್.ಡಬ್ಲ್ಯೂ.ಎಸ್–681/ಎಸ್.ಡಬ್ಲ್ಯೂ–89, ಬೆಂಗಳೂರು ದಿನಾಂಕ: 02.11.1990.

2) ಸರ್ಕಾರದ ಆದೇಶ ಸಂಖ್ಯೆ: ಸ.ಕ.ಇ.–421/ಪಕವಿ–95, ಬೆಂಗಳೂರು, ದಿನಾಂಕ:29.07.1997.

3) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಸ.ಕ.ಇ/ಸಮನ್ವಯ. 6/ಸಿಆರ್–14/97–98, ದಿನಾಂಕ:07.08.1997 ಮತ್ತು 14.10.1997.

4) ಸರ್ಕಾರದ ಆದೇಶ ಸಂಖ್ಯೆ: ಸಕ.ಇ–535/ಸಕನಿ–2000, ಬೆಂಗಳೂರು, ದಿನಾಂಕ:28.03.2001.

5) ಸರ್ಕಾರಿ ಆದೇಶ ಸಂಖ್ಯೆ: ಸಕಇ–349/ಪಕವಿ–05, ದಿನಾಂಕ:28.01.2006.

ಬಳ್ಳಾರಿ ಜಿಲ್ಲೆಯಲ್ಲಿರುವ ಪರಿಶಿಷ್ಟ ಜಾತಿಗೆ ಸೇರಿರುವ ಕಾನೂನು ಪದವೀಧರರಿಗೆ 2009–10ನೇ ಸಾಲಿಗೆ ಆಡಳಿತ ನ್ಯಾಯಾಧೀಕರಣದಲ್ಲಿ 4 ವರ್ಷಗಳ ತರಬೇತಿಯನ್ನು ನೀಡುವ ಸಲುವಾಗಿ ಅರ್ಹ ಪರಿಶಿಷ್ಟ ಜಾತಿಯ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಈ ತರಬೇತಿಯನ್ನು ಪಡೆಯಲು ಇಚ್ಛಿಸುವ ಪರಿಶಿಷ್ಟ ಜಾತಿಯ ಅಭ್ಯರ್ಥಿಗಳು ಈ ಕೆಳಕಂಡ ಅರ್ಹತೆಯನ್ನು ಕಡ್ಡಾಯವಾಗಿ ಹೊಂದಿರತಕ್ಕದ್ದು.

1) ಅಭ್ಯರ್ಥಿಗಳು ಪರಿಶಿಷ್ಟ ಜಾತಿಗೆ ಸೇರಿದವರಾಗಿರಬೇಕು.

2) ಬಳ್ಳಾರಿ ಜಿಲ್ಲೆಗೆ ಮಾತ್ರ ಸಂಬಂಧಿಸಿದ ಹಾಗೂ ವಕೀಲ ವೃತ್ತಿ ನಡೆಸಲು ಅರ್ಹತೆಯುಳ್ಳ ಕಾನೂನು ಪದವೀಧರರು ಮಾತ್ರ ಈ ತರಬೇತಿಗೆ ಅರ್ಹರು.

3) ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ 2 ವರ್ಷದೊಳಗೆ ಕಾನೂನು ಪದವಿಯನ್ನು ಪಡೆದಿರಬೇಕು. (ಅರ್ಜಿಯೊಂದಿಗೆ ಕಾನೂನು ಪದವಿಯ 3 ವರ್ಷದ ಅಂಕಪಟ್ಟಿಗಳ ಜೆರಾಕ್ಸ್ ಪ್ರತಿಗಳನ್ನು ಸಲ್ಲಿಸತಕ್ಕದ್ದು.

4) ಅಭ್ಯರ್ಥಿಯ ವಯಸ್ಸು, ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕದಂದು 35 ವರ್ಷಗಳನ್ನು ಮೀರಿರಬಾರದು. ಈ ಕುರಿತು ಅಧಿಕೃತ ಪ್ರಮಾಣ ಪತ್ರ (ಎಸ್.ಎಸ್.ಎಲ್.ಸಿ.) ಅಂಕಪಟ್ಟಿ ಪ್ರತಿ ಲಗತ್ತಿಸಬೇಕು.

5) ಈ ತರಬೇತಿಗೆ ಅರ್ಜಿಯನ್ನು ಸಲ್ಲಿಸಲು ಇಚ್ಛಿಸುವ ಅಭ್ಯರ್ಥಿಗಳು ಅರ್ಜಿಗಳನ್ನು ದ್ವಿಪ್ರತಿಗಳಲ್ಲಿ ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಎಲ್ಲಾ ಪರೀಕ್ಷೆಗಳ ಅಂಕಪಟ್ಟಿಗಳ ಜೆರಾಕ್ಸ್ ಮತ್ತು ಜಾತಿ ಪ್ರಮಾಣ ಪತ್ರ, ಬಾರ್ ಕೌನ್ಸಿಲ್‌ನಲ್ಲಿ ನೊಂದಣಿ ಮಾಡಿದ ಪ್ರಮಾಣ ಪತ್ರದ ದೃಢೀಕೃತ ಪ್ರತಿಗಳೊಂದಿಗೆ ಸಲ್ಲಿಸಬೇಕು.

6) ಈಗಾಗಲೇ ಕಾನೂನು ವಿಷಯದಲ್ಲಿ ಯಾವುದಾದರೂ ತರಬೇತಿ ಪಡೆದಿರಬಾರದು.

**ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು**

1) ಈ ತರಬೇತಿಗೆ ಪರಿಶಿಷ್ಟ ಜಾತಿಯ 15 ಅಭ್ಯರ್ಥಿಗಳನ್ನು ಮಾತ್ರ ಆಯ್ಕೆ ಮಾಡಲಾಗುವುದು.

2) ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ನ್ಯಾಯಾಂಗ ಆಡಳಿತ ತರಬೇತಿಯನ್ನು ಸರ್ಕಾರಿ ವಕೀಲರು ಪಬ್ಲಿಕ್ ಪ್ರಾಸಿಕ್ಯೂಟರ್ ಅಥವಾ 20 ವರ್ಷಗಳ ಅನುಭವ ಹೊಂದಿರುವ ಹಿರಿಯ ವಕೀಲರಲ್ಲಿ ನೀಡಲಾಗುವುದು.

ಈ ವಿಷಯದ ಬಗ್ಗೆ ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮವಾದದ್ದು.

3) ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾಹೆಯಾನ ರೂ.1,000/– (ರೂ. ಒಂದು ಸಾವಿರ ಮಾತ್ರ) 4 ವರ್ಷದವರೆಗೂ ಸ್ಟೈಫಂಡ್ ನೀಡಲಾಗುವುದು.

4) ಈ ತರಬೇತಿಗೆ ಅಭ್ಯರ್ಥಿಗಳನ್ನು ಮಾನ್ಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಬಳ್ಳಾರಿ ಇವರ ಅಧ್ಯಕ್ಷತೆಯಲ್ಲಿ ರಚಿತವಾದ ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯ ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು.

5) ಆಯ್ಕೆಯಾದ ಅಭ್ಯರ್ಥಿಗಳು ತರಬೇತಿಯನ್ನು ಮಧ್ಯದಲ್ಲಿ ಬಿಟ್ಟುಹೋಗಬಾರದು (ಕೇಂದ್ರ/ರಾಜ್ಯ ಸರ್ಕಾರದಲ್ಲಿ ಉದ್ಯೋಗ ದೊರೆತ ಅಭ್ಯರ್ಥಿಗಳಿಗೆ ಈ ನಿಬಂಧನೆ ಅನ್ವಯಿಸುವುದಿಲ್ಲ).

6) ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಮಾಹಿತಿ ದಾಖಲೆ ಒದಗಿಸಿದ್ದಲ್ಲಿ, ಅಂತಹವರನ್ನು ಕಾನೂನಿನ ಶಿಸ್ತಿನ ಕ್ರಮಕ್ಕೆ ಒಳಪಡಿಸಲಾಗುವುದು. ಹಾಗೂ ತರಬೇತಿಯನ್ನು ಮದ್ಯದಲ್ಲಿ ಬಿಟ್ಟುಹೋದಲ್ಲಿ, ಅಂತಹವರಿಗೆ ನೀಡಿದ ಸ್ಟೈಫಂಡ್ ಹಣವನ್ನು ಶೇ.10 ರಷ್ಟು ಬಡ್ಡಿ ಸೇರಿಸಿ, ಭೂ ಕಂದಾಯ ಬಾಕಿ ಎಂದು ಪರಿಗಣಿಸಿ, ವಸೂಲಿ ಮಾಡಲಾಗುವುದು. ಈ ಬಗ್ಗೆ ಆಯ್ಕೆಯಾದ ಅಭ್ಯರ್ಥಿಗಳು ಕರಾರು ಪತ್ರವನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ಬರೆದುಕೊಡತಕ್ಕದ್ದು.

7) ಸಂದರ್ಶನದಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾತ್ರ ಈ ಕಛೇರಿಯಿಂದ ತಿಳಿಸಲಾಗುವುದು. ಹಾಗೂ ತರಬೇತಿ ಪಡೆಯಲು ಆಯ್ಕೆಯಾದ ಅಭ್ಯರ್ಥಿಗಳು ಆಯ್ಕೆ ಪತ್ರ ತಲುಪಿದ 15 ದಿನಗಳೊಳಗಾಗಿ ತಮ್ಮ ಒಪ್ಪಿಗೆ ಪತ್ರವನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ಸಲ್ಲಿಸತಕ್ಕದ್ದು.

8) ಪೂರ್ಣ ಭರ್ತಿ ಮಾಡಿದ ಅರ್ಜಿಗಳನ್ನು (ದ್ವಿ ಪ್ರತಿಗಳಲ್ಲಿ) ಕಾರ್ಯದರ್ಶಿಗಳು, ಜಿಲ್ಲಾ ಮಟ್ಟದ ನ್ಯಾಯಾಂಗ ತರಬೇತಿ ಆಯ್ಕೆ ಸಮಿತಿ ಮತ್ತು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ ಇವರಿಗೆ ದಿನಾಂಕ:30.09.2009 ರಂದು ಸಾಯಂಕಾಲ 5.30 ಗಂಟೆಯೊಳಗೆ ಸಲ್ಲಿಸತಕ್ಕದ್ದು.

9) ಅಪೂರ್ಣ ಮಾಹಿತಿ ಸಲ್ಲಿಸಿದ ಹಾಗೂ ಅನರ್ಹ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಹಕ್ಕು ಆಯ್ಕೆ ಸಮಿತಿಗೆ ಇರುತ್ತದೆ.

**ಸೂಚನೆ:** ಅರ್ಜಿಗಳನ್ನು ಮತ್ತು ಹೆಚ್ಚಿನ ಮಾಹಿತಿಯನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಬಳ್ಳಾರಿ ಹಾಗೂ ಸಂಬಂಧಪಟ್ಟ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯಿಂದ ಪಡೆಯತಕ್ಕದ್ದು.

**ಎಂ.ವಿ. ಶ್ರೀನಿವಾಸುಲು**
ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಹಾಗೂ ಸದಸ್ಯ ಕಾರ್ಯದರ್ಶಿ,
ಕಾನೂನು ಪದವೀಧರರ ನ್ಯಾಯಾಂಗ ಆಡಳಿತ ತರಬೇತಿ ಆಯ್ಕೆ ಸಮಿತಿ, ಬಳ್ಳಾರಿ.

**ಪ್ರಕಟಣೆ**

ಸಮಾಜ ಕಲ್ಯಾಣ ಇಲಾಖಾವತಿಯಿಂದ 2009–10ನೇ ಸಾಲಿಗೆ ಪರಿಶಿಷ್ಟಜಾತಿ: ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ 4 ವರ್ಷದ ಕಾನೂನು ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ. ವಿವರವಾದ ಮಾಹಿತಿಯನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ, ಎಲ್ಲಾ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳಿಂದ, ನ್ಯಾಯಾಲಯದ ಬಾರ್ ಅಸೋಸಿಯೇಷನ್‌ಗಳಿಂದ ಪಡೆಯಬಹುದಾಗಿದೆ. ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ:30.09.2009 ರಂದು ಸಾಯಂಕಾಲ 5–00 ಗಂಟೆ.

**ಎಂ.ವಿ. ಶ್ರೀನಿವಾಸುಲು**
ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಹಾಗೂ ಸದಸ್ಯ ಕಾರ್ಯದರ್ಶಿ,
ಕಾನೂನು ಪದವೀಧರರ ನ್ಯಾಯಾಂಗ ಆಡಳಿತ ತರಬೇತಿ ಆಯ್ಕೆ ಸಮಿತಿ, ಬಳ್ಳಾರಿ.

**ಪ್ರಕಟಣೆ**

ಸಮಾಜ ಕಲ್ಯಾಣ ಇಲಾಖಾವತಿಯಿಂದ 2009–10ನೇ ಸಾಲಿಗೆ ಪರಿಶಿಷ್ಟಜಾತಿ: ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ 4 ವರ್ಷದ ಕಾನೂನು ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ. ವಿವರವಾದ ಮಾಹಿತಿಯನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಬಳ್ಳಾರಿ, ಎಲ್ಲಾ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳಿಂದ, ನ್ಯಾಯಾಲಯದ ಬಾರ್ ಅಸೋಸಿಯೇಷನ್‌ಗಳಿಂದ ಪಡೆಯಬಹುದಾಗಿದೆ. ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ:30.09.2009 ರಂದು ಸಾಯಂಕಾಲ 5–00 ಗಂಟೆ.

**ಎಂ.ವಿ. ಶ್ರೀನಿವಾಸುಲು**
ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ ಹಾಗೂ ಸದಸ್ಯ ಕಾರ್ಯದರ್ಶಿ,
ಪಿ.ಆರ್.687 ಕಾನೂನು ಪದವೀಧರರ ನ್ಯಾಯಾಂಗ ಆಡಳಿತ ತರಬೇತಿ ಆಯ್ಕೆ ಸಮಿತಿ, ಬಳ್ಳಾರಿ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಅಧಿಕೃತ ಜ್ಞಾಪನ

**ಸಂ : ಎಲ್.ಎನ್.ಡಿ.(ಎನ್):ಸಿಆರ್ 326/06–07, ಬೆಂಗಳೂರು, ದಿನಾಂಕ:17ನೇ ಜೂನ್ 2008**

**ವಿಷಯ :** ಬೆಂಗಳೂರು ಜಿಲ್ಲೆ, ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಸೋಮಶೆಟ್ಟಿ ಹಳ್ಳಿ ಗ್ರಾಮದ ಸರ್ವೆ ನಂ. 25 ರಲ್ಲಿನ 6–08 ಎಕರೆ : ಗುಂಟೆ ಜಮೀನನ್ನು ಪೀಣ್ಯ ಪ್ಲಾಂಟೇಷನ್, ಸಿದ್ದಾರ್ಥನಗರ ವಸತಿ ಹೀನರಿಗೆ ನಿವೇಶನ ಮಂಜೂರಾತಿ ಬಗ್ಗೆ ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಗೆ ಹಸ್ತಾಂತರ ಮಾಡುವ ಕುರಿತು.

**ಉಲ್ಲೇಖ :** 1. ಸರ್ಕಾರದ ಪತ್ರದ ಸಂಖ್ಯೆ. ಆರ್‌ಡಿ 20 ಎಲ್.ಜಿ.ಬಿ. 2007 ದಿನಾಂಕ: 22–04–2008.

2. ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ರವರ ಪತ್ರದ ಸಂಖ್ಯೆ ಎಲ್‌ಎನ್‌ಡಿ.ಸಿಆರ್.325/06–07, ದಿ: 5–2–2007.

ಬೆಂಗಳೂರು ಉತ್ತರ ತಾಲ್ಲೂಕು, ಪೀಣ್ಯ ಪ್ಲಾಂಟೇಷನ್ ಸರ್ವೆ ನಂ. 2 ರಲ್ಲಿನ ಜಮೀನಿನಲ್ಲಿ ವಾಸಿಸುತ್ತಿದ್ದ ಕೊಳಚೆ ನಿವಾಸಿಗಳನ್ನು ವಾಯು ಸೇನಾ ಅಧಿಕಾರಿಗಳು ತೆರವುಗೊಳಿಸಿದ್ದು, ತೆರವುಗೊಳಿಸಿದ ಕೊಳಚೆ ನಿವಾಸಿಗಳಿಗೆ ಹಾಗೂ ಹಾಲಿ ವಾಸಿಸುತ್ತಿರುವ ಕೊಳಚೆ ನಿವಾಸಿಗಳಿಗೆ ನಿವೇಶನ ಮತ್ತು ಮನೆ ನಿರ್ಮಿಸುವ ಸಲುವಾಗಿ ಉಲ್ಲೇಖ (1) ರಲ್ಲಿನ ಸರ್ಕಾರದ ಪತ್ರ ಸಂಖ್ಯೆ ಆರ್‌ಡಿ 20 ಎಲ್‌ಜಿಬಿ 2007, ದಿನಾಂಕ:22–04–2008ರ ಆದೇಶದಲ್ಲಿ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಸೋಮಶೆಟ್ಟಿಹಳ್ಳಿ ಗ್ರಾಮದ ಸ.ನಂ. 25 ರಲ್ಲಿನ 6–08 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1966 ನಿಯಮ 97(4)ರ ಅನ್ವಯ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71 ರನ್ವಯ ಕಾಯ್ದಿರಿಸಿ ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಗೆ ಹಸ್ತಾಂತರಿಸಲು ಸರ್ಕಾರ ಉಲ್ಲೇಖ (1)ರಲ್ಲಿ ಅನುಮತಿ ನೀಡಿರುತ್ತದೆ.

ಉಲ್ಲೇಖ(1)ರ ಸರ್ಕಾರದ ಪೂರ್ವಾನುಮೋದನೆಯಂತೆ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಸೋಮಶೆಟ್ಟಿಹಳ್ಳಿ ಗ್ರಾಮದ ಸ.ನಂ. 25 ರಲ್ಲಿನ 6–08 ಎಕರೆ:ಗುಂಟೆ ಜಮೀನನ್ನು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1966ರ ನಿಯಮ 97(4)ರನ್ವಯ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಹಸ್ತಾಂತರಿಸಲು ಆದೇಶವನ್ನು ನೀಡಲಾಗಿದೆ.

**ಷರತ್ತುಗಳು**

1. ಈ ಜಮೀನಿನ ಹಸ್ತಾಂತರಿಕೆಯು 1966 ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.
2. ಹಸ್ತಾಂತರಿಸಲ್ಪಟ್ಟ ಜಮೀನನ್ನು ನಿಗದಿತ ಉದ್ದೇಶಕ್ಕೆ 2 ವರ್ಷದ ಒಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು.
3. ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.
4. ಸಂಸ್ಥೆಗೆ ಹಸ್ತಾಂತರಿಸಿದ ಭೂಮಿಯನ್ನು ಬೇರೆ ಯಾರಿಗೂ ಗುತ್ತಿಗೆ ಕೊಡತಕ್ಕದ್ದಲ್ಲ. ಅಥವಾ ಪರಭಾರೆ ಮಾಡತಕ್ಕದ್ದಲ್ಲ. ಆದರೆ ಈ ಜಮೀನನ್ನು ಯಾವುದೇ ಬ್ಯಾಂಕ್/ಸಹಕಾರ ಸಂಘಗಳಿಗೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಸಾಲ ಪಡೆಯಲು ಆಧಾರ ಮಾಡಲು ಅನುಮತಿ ನೀಡಲಾಗಿದೆ. ಆದರೆ ಸಾಲ ತೀರುವಳಿಗಾಗಿ ಈ ಜಮೀನನ್ನು ಬ್ಯಾಂಕ್/ಸಂಸ್ಥೆ ಮತ್ತು ಪ್ರಾಧಿಕಾರ ಮುಟ್ಟುಗೋಲು ಹಾಕಿಕೊಳ್ಳಲು ಹಕ್ಕು ಇರುವುದಿಲ್ಲ.
5. ಯಾವ ಉದ್ದೇಶಕ್ಕಾಗಿ ಹಸ್ತಾಂತರ ಮಾಡಲಾಗಿದೆಯೋ ಅದರ ಹೊರತು ಇತರೇ ಯಾವುದೇ ಉದ್ದೇಶಕ್ಕೆ ಈ ಜಮೀನನ್ನು ಉಪಯೋಗಿಸತಕ್ಕದ್ದಲ್ಲ.
6. ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಮತ್ತು ನೊಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೊಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿಯನ್ನು ಮಾಡಿಸಿಕೊಳ್ಳತಕ್ಕದ್ದು.
7. ಈ ಹಸ್ತಾಂತರಿಕೆಯು ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
8. ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವಾಗಿದ್ದರೆ ಮೂರು ತಿಂಗಳ ನೋಟೀಸನ್ನು ಕೊಟ್ಟು ತರುವಾಯ ಹಿಂತೆಗೆದುಕೊಳ್ಳಲಾಗುವುದು. ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.
9. ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಿಗಳಿಂದ ಕಾನೂನು ರೀತ್ಯಾ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.

10. ಶಾಸನಬದ್ಧ ಕಾಯ್ದೆಗಳ ಕಟ್ಟು ಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.
11. ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆ ಬಾಳುವ ನಿಧಿ, ನಿಕ್ಷೇಪ ಇತ್ಯಾದಿಗಳನ್ನು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.
12. ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
13. ಆರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1966ರ ನಿಯಮ 97(4)ರಡಿಯಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಕರಾರುಪತ್ರವನ್ನು ಬರೆದುಕೊಡತಕ್ಕದ್ದು.
14. ಹಸ್ತಾಂತರಿಸಲ್ಪಟ್ಟ ಜಮೀನಿನಲ್ಲಿ ಅರ್ಹ ಫಲಾನುಭವಿಗಳಿಗೆ ನಿಯಮಾನುಸಾರ ನಿವೇಶನ ಮತ್ತು ಮನೆಗಳನ್ನು ಹಂಚಿಕೆ ಮಾಡಲು ಕ್ರಮ ಕೈಗೊಳ್ಳತಕ್ಕದ್ದು, ಹೆಚ್ಚುವರಿಯಾಗಿ ಉಳಿಯುವ ಜಮೀನನ್ನು ಬೇರೆ ಯಾವುದೇ ಉದ್ದೇಶಕ್ಕಾಗಿ ಬಳಸತಕ್ಕದ್ದಲ್ಲ.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ, ಈ ಭೂ ಹಸ್ತಾಂತರಿಕೆಯು ತನಗೆ ತಾನಾಗಿ ರದ್ದುಗೊಳ್ಳುತ್ತದೆ ಮತ್ತು ಆರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ಪಿ.ಆರ್. ನಂ. 692

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು

## ಉಡುಪಿ ಜಿಲ್ಲಾ ಪಂಚಾಯತ್, ಸಾರ್ವಜನಿಕ ಶಿಕ್ಷಣ ಇಲಾಖೆ, ಉಪನಿರ್ದೇಶಕರ ಕಛೇರಿ, ಉಡುಪಿ

## ಜ್ಞಾಪನ

**ನಂ : ಎ2(ಎ1)/54/ಶಿಸ್ತು.ಅ.ಗೈ.ಹಾ.–1/2004–05, ದಿನಾಂಕ:15ನೇ ಸೆಪ್ಟೆಂಬರ್, 2008**

**ವಿಷಯ :–** ಶ್ರೀಮತಿ ಮಂಗಳಾ ನಾಯ್ಕ, ಸ.ಶಿ., ಸ.ಹಿ.ಪ್ರಾ.ಶಾಲೆ, ಶೀರೂರು, ಬೈಂದೂರು ವಲಯ, ಉಡುಪಿ ಜಿಲ್ಲೆ ಇವರು ದಿನಾಂಕ: 25–06–2003ರಿಂದ ಸತತವಾಗಿ ಸೇವೆಗೆ ಅನಧಿಕೃತ ಗೈರು ಹಾಜರಾಗಿರುವುದರಿಂದ ಅವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡುವ ಕುರಿತು.

**ಉಲ್ಲೇಖ :–** 1. ಕ್ಷೇತ್ರ ಶಿಕ್ಷಣಾಧಿಕಾರಿಗಳು, ಬೈಂದೂರು ವಲಯ ಇವರ ಪತ್ರ ಸಂ. ಇ2:ಅನ:ಗೈ.ಹಾ:ಪ್ರಾ.ಶಾ–01/2004–05 ದಿನಾಂಕ: 06–11–2004, 28–12–2005, 26–09–2007 ಮತ್ತು 20–02–2008.

2. ಈ ಕಛೇರಿಯಿಂದ ಕಳುಹಿಸಲಾದ ನೋಟೀಸು ದಿನಾಂಕ: 01–01–2005 ಮತ್ತು 31–03–2008.

**ಪ್ರಸ್ತಾವನೆ :**

ಶ್ರೀಮತಿ ಮಂಗಳಾ ನಾಯ್ಕ್, ಸ.ಶಿ., ಸ.ಹಿ.ಪ್ರಾ.ಶಾಲೆ, ಶಿರೂರು ಇವರು ದಿನಾಂಕ: 04–02–1977 ರಲ್ಲಿ ಶಿಕ್ಷಕಿಯಾಗಿ ಕರ್ತವ್ಯಕ್ಕೆ ಸೇರ್ಪಡೆಗೊಂಡಿದ್ದು, ದಿನಾಂಕ: 25–06–2003ರಿಂದ ಈ ವರೆಗೆ ಅನಧಿಕೃತ ಗೈರು ಹಾಜರಾಗಿರುತ್ತಾರೆ. 4 ತಿಂಗಳಿಗೂ ಮೇಲ್ಪಟ್ಟು ಸೇವೆಗೆ ಗೈರು ಹಾಜರಾದ ಈ ಶಿಕ್ಷಕಿಯು ಕೂಡಲೇ ಹಾಜರಾಗಿ ವಿವರಣೆ ನೀಡುವಂತೆ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಬೈಂದೂರು ವಲಯ ಇವರು ದಿನಾಂಕ: 25–11–2003, 24–12–2003, 02–02–2004, 26–06–2004 ಮತ್ತು 14–08–2004ರಲ್ಲಿ ನೋಟೀಸು ನೀಡಿದ್ದರೂ ಅದಕ್ಕೆ ಸದರಿಯವರು ಯಾವುದೇ ಉತ್ತರ ನೀಡಿರುವುದಿಲ್ಲ. ಹಾಗೂ ಸೇವೆಗೆ ಹಾಜರಾಗಿರುವುದಿಲ್ಲ. ಬಳಿಕ ದಿನಾಂಕ: 01–01–2005 ಮತ್ತು 31–03–2008ರಲ್ಲಿ ಉಪನಿರ್ದೇಶಕರ ಕಛೇರಿಯಿಂದ ನೀಡಲಾದ ಜ್ಞಾಪನಕ್ಕೂ ಸದರಿಯವರಿಂದ ಉತ್ತರ ಬಂದಿರುವುದಿಲ್ಲ. ಆನಂತರ ಸದರಿ ನೋಟೀಸನ್ನು ದಿನಾಂಕ: 27–07–2008ರ ಉದಯವಾಣಿ ದಿನ ಪತ್ರಿಕೆಯಲ್ಲಿ ಪ್ರಕಟಿಸಿ, ಒಂದು ವಾರದೊಳಗೆ ಸದರಿಯವರು ಈ ಕಛೇರಿಯಲ್ಲಿ ಹಾಜರಾಗಿ ಅನಧಿಕೃತ ಗೈರು ಹಾಜರಿ ಬಗ್ಗೆ ವಿವರಣೆ ನೀಡುವಂತೆ ತಿಳಿಸಿದ್ದರೂ ಈವರೆಗೂ ಹಾಜರಾಗಿರುವುದಿಲ್ಲ ಹಾಗೂ ವಿವರಣೆ ನೀಡಿರುವುದಿಲ್ಲ. ಇದರಿಂದ ಇವರಿಗೆ ಸರಕಾರಿ ಕೆಲಸದಲ್ಲಿ ಮುಂದುವರಿಯಲು ಆಸಕ್ತಿ ಇಲ್ಲವೆಂಬುದು ಸ್ಪಷ್ಟವಾಗುತ್ತದೆ. ಆದುದರಿಂದ ಇವರ ವಿರುದ್ಧ ಶಿಸ್ತಿನ ಕ್ರಮ ಕೈಗೊಂಡು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 8 ಉಪನಿಯಮ viii ರನ್ವಯ ಸರಕಾರಿ ಸೇವೆಯಿಂದ ವಜಾ ಮಾಡಲು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

## ಆದೇಶ

ಶ್ರೀಮತಿ ಮಂಗಳಾ ನಾಯ್ಕ್, ಸಹ ಶಿಕ್ಷಕಿ, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಶಿರೂರು, ಬೈಂದೂರು ವಲಯ, ಉಡುಪಿ ಜಿಲ್ಲೆ ಇವರು ದಿನಾಂಕ: 25–06–2003ರಿಂದ ಸತತವಾಗಿ ಸರಕಾರಿ ಸೇವೆಗೆ ಅನಧಿಕೃತವಾಗಿ ಗೈರು ಹಾಜರಾಗಿದ್ದು, ಸದರಿಯವರಿಗೆ ಕಾಲಕಾಲಕ್ಕೆ ನೀಡಿದ ನೋಟೀಸು ಹಾಗೂ ದಿನಾಂಕ: 27–07–2008ರ ಪತ್ರಿಕಾ ನೋಟೀಸಿಗೂ ಸಹ ಉತ್ತರ ಸಲ್ಲಿಸದೇ ಕರ್ತವ್ಯ ಲೋಪವೆಸಗಿ ಕರ್ನಾಟಕ ನಾಗರೀಕ ಸೇವಾ ನಡಾವಳಿಯ ನಿಯಮ ಉಲ್ಲಂಘಿಸಿರುವುದು ಸ್ಪಷ್ಟವಾಗಿರುತ್ತದೆ. ಆದುದರಿಂದ ಕೆ. ಆನಂದ, ಶಿಸ್ತು ಪ್ರಾಧಿಕಾರಿಗಳು/ಉಪನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಉಡುಪಿ ಜಿಲ್ಲೆ, ಉಡುಪಿ ಆದ ನಾನು ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,

ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 8ರ ಉಪನಿಯಮ viii ರನ್ವಯ ಶ್ರೀಮತಿ ಮಂಗಳಾ ನಾಯ್ಕ್, ಸಹ ಶಿಕ್ಷಕಿ, ಸ.ಹಿ.ಪ್ರಾ.ಶಾಲೆ, ಶಿರೂರು, ಬೈಂದೂರು ವಲಯ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿದ ವಜಾ ಮಾಡಿ ಆದೇಶಿಸಲಾಗಿದೆ.

ಕೆ. ಆನಂದ
ಉಪನಿರ್ದೇಶಕರು, (ಆಡಳಿತ) ಹಾಗೂ ಶಿಸ್ತು ಪ್ರಾಧಿಕಾರಿ
ಸಾರ್ವಜನಿಕ ಶಿಕ್ಷಣ ಇಲಾಖೆ, ಉಡುಪಿ ಜಿಲ್ಲೆ, ಉಡುಪಿ

ಪಿ.ಆರ್. ನಂ. 1074

## ಕರ್ನಾಟಕ ಲೋಕಸೇವಾ ಆಯೋಗ

### ಕಾರ್ಯದರ್ಶಿ ಹಾಗೂ ನಿಯಂತ್ರಕರು (ಪ್ರ), ಇಲಾಖಾ ಪರೀಕ್ಷೆಗಳು, ಕರ್ನಾಟಕ ಲೋಕಸೇವಾ ಆಯೋಗ

**ವಿಷಯ :–** 2007ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಲ್ಲಿ ಶ್ರೀಯುತರಾದ ಶ್ರೀ ಅಬ್ದುಲ್ ಲತೀಫ್, ನೋಂದಣಿ ಸಂಖ್ಯೆ:84313 ಶ್ರೀ ಲೋಕನಾಥ್ ಬಿ.ವಿ.ಎಸ್. ನೋಂದಣಿ ಸಂಖ್ಯೆ: 84707 ಮತ್ತು ಶ್ರೀ ಗೋವಿಂದ ರಾಜು .ಟಿ ನೋಂದಣಿ ಸಂಖ್ಯೆ: 84613 ಇವರುಗಳು ಎಸಗಿದ ದುರಾಚಾರ ಪ್ರಕರಣದ ದಂಡನೆ ವಿಧಿಸುವ ಆದೇಶ.

**ಓದಲಾಗಿದೆ :–** (1) ಅಬ್ದುಲ್ ಲತೀಫ್ ನೋಂದಣಿ ಸಂಖ್ಯೆ: 84313 ಲೋಕನಾಥ್ ಬಿ.ವಿ.ಎಸ್. ನೋಂದಣಿ ಸಂಖ್ಯೆ: 84707 ಗೋವಿಂದರಾಜು .ಟಿ ನೋಂದಣಿ ಸಂಖ್ಯೆ: 84613 ಶಿವಮೊಗ್ಗ ಕೇಂದ್ರ ಅರ್ಜಿ ಸಲ್ಲಿಸಿದ ದಿನಾಂಕಗಳು 28–08–2007 ಮತ್ತು 30–7–2007.

(2) ನೋಟೀಸ್ ಸಂಖ್ಯೆ: ಆರ್‌ಹೆಚ್‌ಎಸ್ 238/2007–08 ಪಿಎಸ್‌ಸಿ ದಿನಾಂಕ: 31–01–2008.

(3) ಶ್ರೀಯುತರ ಸಮಜಾಯಿಷಿ ದಿನಾಂಕಗಳು 12–02–2008.

**ಪ್ರಸ್ತಾವನೆ :**

ಕರ್ನಾಟಕ ಲೋಕಸೇವಾ ಆಯೋಗವು ದಿನಾಂಕ: 26–11–2007ರಂದು ನಡೆಸಿದ 2007ನೇ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಕನ್ನಡ ಭಾಷಾ ವಿಷಯದ ಪತ್ರಿಕೆ–1ರ ಪರೀಕ್ಷೆಯನ್ನು ಬರೆಯುವ ಸಂದರ್ಭದಲ್ಲಿ ಉತ್ತರಪತ್ರಿಕೆಗಳನ್ನು ಬದಲಾಯಿಸಿಕೊಂಡು ಬರೆದಿರುವುದು ಕಂಡು ಬಂದಿರುವ ಹಿನ್ನೆಲೆಯಲ್ಲಿ ಉಲ್ಲೇಖ(2)ರ ದಿನಾಂಕ: 31–01–2008ರಲ್ಲಿ ಮೇಲ್ಕಂಡ ಮೂರು ಅಭ್ಯರ್ಥಿಗಳಿಗೆ ಸಮಜಾಯಿಷಿಯನ್ನು ಕೇಳಲಾಗಿತ್ತು.

(1) ಶ್ರೀ ಅಬ್ದುಲ್ ಲತೀಫ್, ಅರಣ್ಯ ರಕ್ಷಕ, ಆರ್‌ಎಫ್‌ಓ ಕಛೇರಿ, ಆನಂದಪುರ ವಲಯ, ಚೋರಡಿ, ಶಿವಮೊಗ್ಗ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ನೋಂದಣಿ ಸಂಖ್ಯೆ: 84313 (2) ಲೋಕನಾಥ್ ಬಿ.ವಿ.ಎಸ್. ಅರಣ್ಯ ರಕ್ಷಕ, ಆರ್‌ಎಫ್‌ಓ ಕಛೇರಿ, ಸಾಗರ ವಲಯ, ಸಾಗರ, ಶಿವಮೊಗ್ಗ ಜಿಲ್ಲೆ, ನೋಂದಣಿ 847070 (3) ಗೋವಿಂದರಾಜು ಟಿ. ಅರಣ್ಯ ರಕ್ಷಕ ಆರ್‌ಎಫ್‌ಓ ಕಛೇರಿ, ಅನಂದಪುರಂ ವಲಯ, ಚೋರಡಿ, ಶಿವಮೊಗ್ಗ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ನೋಂದಣಿ ಸಂಖ್ಯೆ: 84613 ಉಲ್ಲೇಖ (3)ರಲ್ಲಿನ ಸಮಜಾಯಿಷಿಯಲ್ಲಿ ಆರೋಪಗಳನ್ನು ಒಪ್ಪಿಕೊಂಡಿರುವುದರಿಂದ ಹಾಗೂ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಓದಲಾದ ದಾಖಲೆ ಸಾಕ್ಷ್ಯ ಇತ್ಯಾದಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ದಿನಾಂಕ: 14–07–1993ರ ಅಧಿಕೃತ ಜ್ಞಾಪನ ಸಂಖ್ಯೆ: ಆಡಳಿತ:398/93–94/ಪಿಎಸ್‌ಸಿ ಅನ್ವಯ ಈ ಕೆಳಕಂಡ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ: ಇಪ(1)340/2007–08/ಪಿಎಸ್‌ಸಿ, ಬೆಂಗಳೂರು, ದಿನಾಂಕ 26ನೇ ಮೇ, 2008.**

1965ರ ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಾವಳಿ ನಿಯಮ 4 ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನಪತ್ರ ಸಂಖ್ಯೆ ಆಡಳಿತ:398/93–94 ಪಿಎಸ್‌ಸಿ ದಿನಾಂಕ: 14–07–1993ರ ಅಧಿಸೂಚನೆಯಂತೆ ಸದರಿ ಇಲಾಖಾ ಪರೀಕ್ಷೆಗಳಿಗೆ ಅಭ್ಯರ್ಥಿಗಳಾದ (1) ಶ್ರೀ ಅಬ್ದುಲ್ ಲತೀಫ್, ಅರಣ್ಯ ರಕ್ಷಕ, ಆರ್‌ಎಫ್‌ಓ ಕಛೇರಿ, ಆನಂದಪುರ ವಲಯ ಚೋರಡಿ, ಶಿವಮೊಗ್ಗ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ನೋಂದಣಿ ಸಂಖ್ಯೆ: 84313 (2) ಲೋಕನಾಥ್ ಬಿ.ವಿ.ಎಸ್. ಅರಣ್ಯ ರಕ್ಷಕ, ಆರ್‌ಎಫ್‌ಓ ಕಛೇರಿ, ಸಾಗರ ವಲಯ, ಸಾಗರ ಶಿವಮೊಗ್ಗ ಜಿಲ್ಲೆ, ನೋಂದಣಿ 847070 (3) ಗೋವಿಂದರಾಜು ಟಿ. ಅರಣ್ಯ ರಕ್ಷಕ ಆರ್‌ಎಫ್‌ಓ ಕಛೇರಿ, ಆನಂದಪುರಂ ವಲಯ ಚೋರಡಿ, ಶಿವಮೊಗ್ಗ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ನೋಂದಣಿ ಸಂಖ್ಯೆ: 84613 ಇವರುಗಳ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದರಿಂದ ಪ್ರಸಕ್ತ 2007ನೇ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯ ಅಭ್ಯರ್ಥಿತನವನ್ನು ರದ್ದುಪಡಿಸಿದೆ ಹಾಗೂ ಮುಂದಿನ 2008ರ ಪ್ರಥಮ ಮತ್ತು ದ್ವಿತೀಯ ಹಾಗೂ 2009ರ ಪ್ರಥಮ ಮತ್ತು ದ್ವಿತೀಯ ಒಟ್ಟು ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ

ಹೆಚ್.ಬಿ. ಚನ್ನರಾಜು
ಕಾರ್ಯದರ್ಶಿ ಹಾಗೂ ನಿಯಂತ್ರಕರು (ಪ್ರ)
ಇಲಾಖಾ ಪರೀಕ್ಷೆಗಳು, ಕರ್ನಾಟಕ ಲೋಕಸೇವಾ ಆಯೋಗ

ಪಿ.ಆರ್. ನಂ. 614

## ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು, ಬೆಂಗಳೂರು ಇವರ ನಡವಳಿಗಳು

**ವಿಷಯ :–** ಶ್ರೀ ಕೆ.ಎಂ. ಹರೀಶ, ದ್ವಿತೀಯ ದರ್ಜೆ ಸಹಾಯಕ ಇವರ ಕರ್ತವ್ಯ ಚ್ಯುತಿ ಬಗ್ಗೆ.

**ಉಲ್ಲೇಖ :–**

(1) ಜಂಟಿ ಕೃಷಿ ನಿರ್ದೇಶಕರು, ಚಾಮರಾಜನಗರ ಇವರ ಪತ್ರ ಸಂಖ್ಯೆ: ಜಕೃನಿ/ಚಾ.ನಗರ/ಸಿಬ್ಬಂದಿ/ಕೆಎಂ.ಹ/ದ್ವಿದಸ/ಗೈಹಾ/03–04, ದಿನಾಂಕ:15–01–2005

(2) ಇಲಾಖಾ ಆದೇಶ ಸಂಖ್ಯೆ : ಸಿಬ್ಬಂದಿ–1/ವಿಚಾರಣೆ–4/20/ಚಾ.ನಗರ/04–05, ದಿನಾಂಕ 15–04–2005.

(3) ಜಂಟಿ ಕೃಷಿ ನಿರ್ದೇಶಕರು, ಚಾಮರಾಜನಗರ ಇವರ ಪತ್ರ ಸಂಖ್ಯೆ : ಸಿಬ್ಬಂದಿ/ಕೆಎಂಹ/ದ್ವಿದಸ/ಗೈಹಾ/04–05, ದಿನಾಂಕ: 5–5–2005.

(4) ಇಲಾಖಾ ಆದೇಶ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–4/20/ಚಾ.ನಗರ/04–05, ದಿನಾಂಕ 22/26–8–2005.

(5) ಜಂಟಿ ಕೃಷಿ ನಿರ್ದೇಶಕರು, ಚಾಮರಾಜನಗರ ಇವರ ಪತ್ರ ಸಂಖ್ಯೆ: ಸಿಬ್ಬಂದಿ/ಕೆಎಂಹ/ದ್ವಿದಸ/ಗೈಹಾ/04–05/05–06, ದಿನಾಂಕ: 5/8–9–2005.

(6) ಶ್ರೀ ಕೆ.ಎಂ. ಹರೀಶ, ದ್ವಿತೀಯ ದರ್ಜೆ ಸಹಾಯಕ ಇವರ ಮನವಿ ದಿನಾಂಕ 7–11–2005.

(7) ಇಲಾಖಾ ಆದೇಶ ಸಂಖ್ಯೆ : ಸಿಬ್ಬಂದಿ–1/ವಿಚಾರಣೆ–4/20/ಚಾ.ನಗರ/04–05, ದಿನಾಂಕ 13–1–2006.

(8) ಇಲಾಖಾ ಆದೇಶ ಸಂಖ್ಯೆ: ಸಿಬ್ಬಂದಿ–1/ವಿಚಾರಣೆ–4/20/ಚಾ.ನಗರ/03–04, ದಿನಾಂಕ 13–7–2007.

(9) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ: 27–12–2007.

(10) 2ನೇ ಕಾರಣ ಕೇಳುವ ಸೂಚನಾ ಪತ್ರ ವಿಚಾರಣಾ ವರದಿಯೊಂದಿಗೆ ದಿನಾಂಕ: 6/12–2–2008.

(11) ಶ್ರೀ ಕೆ.ಎಂ. ಹರೀಶ, ದ್ವಿತೀಯ ದರ್ಜೆ ಸಹಾಯಕ ಇವರ ಹೇಳಿಕೆ ದಿನಾಂಕ: 4–3–2008

(12) ಸರ್ಕಾರದ ಪತ್ರ ಸಂಖ್ಯೆ : ಕೃತೋಇ 100 ಕೃವಸೆ 2008, ದಿನಾಂಕ: 21–6–2008.

(13) ಪರಿವೀಕ್ಷಣಾ ನಿಯಮ – ಡಿಪಿಎಆರ್ 57 ಎಸ್‌ಆರ್‌ಆರ್ 75, ದಿನಾಂಕ: 25–6–1977

**ಪ್ರಸ್ತಾವನೆ :**

ಜಂಟಿ ಕೃಷಿ ನಿರ್ದೇಶಕರು, ಚಾಮರಾಜನಗರ ಇವರು ಓದಲಾದ ಕ್ರ.ಸಂ. (1) ರ ಪತ್ರದಲ್ಲಿ ಅವರ ಕಛೇರಿಯ ದ್ವಿತೀಯ ದರ್ಜೆ ಸಹಾಯಕರಾದ ಶ್ರೀ ಕೆ.ಎಂ. ಹರೀಶ್ ಇವರು ದಿನಾಂಕ: 4–10–2001 ರಿಂದ 21–12–2004 ರವರೆಗೆ ವಿವಿಧ ಅವಧಿಗಳಲ್ಲಿ ಒಟ್ಟು 741 ದಿವಸಗಳ ಕಾಲ ಅನಧಿಕೃತ ಗೈರು ಹಾಜರಾಗಿರುವುದು ಅಲ್ಲದೇ ಪ್ರಸ್ತುತ ಸಹ ಅನಧಿಕೃತ ಗೈರು ಹಾಜರಿ ಮುಂದುವರಿಸಿರುವುದಾಗಿ ವರದಿ ಮಾಡಿರುತ್ತಾರೆ. ಈ ಬಗ್ಗೆ ಅವರು ನೀಡಿದ ಜ್ಞಾಪನಾ ಪತ್ರಗಳಿಗೂ ಸ್ಪಂದಿಸದೇ ನೌಕರರು ಬೇಜವಾಬ್ದಾರಿಯಿಂದ ವರ್ತಿಸಿರುವುದಾಗಿ ವರದಿ ನೀಡಿರುತ್ತಾರೆ. ಜಂಟಿ ಕೃಷಿ ನಿರ್ದೇಶಕರು, ಚಾಮರಾಜನಗರ ಇವರ ವರದಿಯ ಪರಿಶೀಲನೆಯಿಂದ ಶ್ರೀ ಕೆ.ಎಂ. ಹರೀಶ, ದ್ವಿತೀಯ ದರ್ಜೆ ಸಹಾಯಕ ಇವರ ಅನಧಿಕೃತ ಗೈರು ಹಾಜರಿಯು ಮೇಲ್ನೋಟಕ್ಕೆ ಕಂಡು ಬಂದುದರಿಂದ, ಸದರಿಯವರ ಆರೋಪವನ್ನು ಗಂಭೀರವಾಗಿ ಪರಿಗಣಿಸಿ ಓದಲಾದ ಕ್ರ.ಸಂ. (2) ರ ಇಲಾಖಾ ಆದೇಶದಲ್ಲಿ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ. ಓದಲಾದ ಕ್ರ.ಸಂ. (3) ರ ಪತ್ರದಲ್ಲಿ ಜಂಟಿ ಕೃಷಿ ನಿರ್ದೇಶಕರು, ಚಾಮರಾಜನಗರ ಇವರು ಅಮಾನತ್ತು ಆದೇಶವನ್ನು ನೌಕರರಿಗೆ ಜಾರಿ ಮಾಡಿ ಅವರಿಂದ ದಿನಾಂಕ ಸಹಿತ ಸ್ವೀಕೃತಿಯನ್ನು ಪಡೆದು ಇಲಾಖೆಗೆ ಸಲ್ಲಿಸಿರುತ್ತಾರೆ. ಓದಲಾದ ಕ್ರ.ಸಂ. (4)ರ ಇಲಾಖಾ ಪತ್ರದಲ್ಲಿ ಸದರಿಯವರ ಆರೋಪಗಳ ಬಗ್ಗೆ ಸಿಸಿಎ ನಿಯಮ 11 ರಡಿಯಲ್ಲಿ ದೋಷಾರೋಪಣೆ ಪಟ್ಟಿ ಅನುಬಂಧ–1 ರಿಂದ 4 ನ್ನು ಜಾರಿ ಮಾಡಲಾಗಿತ್ತು. ಓದಲಾದ ಕ್ರ.ಸಂ. (5) ರಲ್ಲಿ ನೌಕರರಿಗೆ ದೋಷಾರೋಪಣೆ ಪಟ್ಟಿಯನ್ನು ಜಾರಿ ಮಾಡಿದ ಬಗ್ಗೆ ಸ್ವೀಕೃತಿಯನ್ನು ಸಲ್ಲಿಸಿರುತ್ತಾರೆ. ಓದಲಾದ ಕ್ರ.ಸಂ. (6) ರಲ್ಲಿನ ಮನವಿಯಲ್ಲಿ ಅವರ ಕುಟುಂಬದ ಆರ್ಥಿಕ ಸಮಸ್ಯೆಗಳಿಂದಾಗಿ ಹಾಗೂ ಅನಾರೋಗ್ಯದ ಕಾರಣ ನೀಡಿರುತ್ತಾರೆ. ಹಾಗೂ ದ್ವಿತೀಯ ದರ್ಜೆ ಸಹಾಯಕ ಹುದ್ದೆಯ ಬದಲಾಗಿ 'ಡಿ' ದರ್ಜೆ ಹುದ್ದೆಗೆ ನೇಮಕಾತಿ ಮಾಡಲು ಕೋರಿರುತ್ತಾರೆ. ಆದಷ್ಟು ಶೀಘ್ರವಾಗಿ ಮರುನೇಮಕಾತಿ ಮಾಡಿಕೊಡುವಂತೆ ಕೋರಿರುತ್ತಾರೆ. ಓದಲಾದ ಕ್ರ.ಸಂ. (7) ರ ಇಲಾಖಾ ಆದೇಶದಲ್ಲಿ ಶ್ರೀಯುತರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ಇಲಾಖಾ ವಿಚಾರಣೆ ಬಾಕಿ ಇಟ್ಟು ವಿಖಂಡನೆಗೊಳಿಸಿ ಸಹಾಯಕ ಕೃಷಿ ನಿರ್ದೇಶಕರು, ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ ಕಛೇರಿಯಲ್ಲಿನ ದ್ವಿತೀಯ ದರ್ಜೆ ಸಹಾಯಕರ ಖಾಲಿ ಹುದ್ದೆಗೆ ಪುನರ್ ನೇಮಕ ಮಾಡಿ ಆದೇಶಿಸಲಾಗಿತ್ತು. ನೌಕರರು ಸಲ್ಲಿಸಿರುವ ಹೇಳಿಕೆ ಬಗ್ಗೆ ನೌಕರರ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ತಿಳಿಯಲು ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ಓದಲಾದ ಕ್ರ.ಸಂ. (8) ರಲ್ಲಿ ನೇಮಿಸಲಾಗಿತ್ತು. ಸದರಿ ವಿಚಾರಣಾಧಿಕಾರಿಗಳು ನಿಯಮಾನುಸಾರ ವಿಚಾರಣೆ ಕೈಗೊಂಡು ಓದಲಾದ ಕ್ರ.ಸಂ. (9) ರಲ್ಲಿ ಇಲಾಖೆಗೆ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

ವಿಚಾರಣಾ ವರದಿಯಲ್ಲಿ ಸದರಿ ನೌಕರರ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿದೆ ಎಂದು ನಿರ್ಣಯಿಸಲಾಗಿದೆ. ಓದಲಾದ ಕ್ರ. ಸಂ.(10) ರಲ್ಲಿ ವಿಚಾರಣಾ ವರದಿಯೊಂದಿಗೆ 2ನೇ ಕಾರಣ ಕೇಳುವ ಸೂಚನಾ ಪತ್ರ ಜಾರಿ ಮಾಡಲಾಗಿತ್ತು. ಇದನ್ನು ಸ್ವೀಕರಿಸಿ ನೌಕರರು ಓದಲಾದ ಕ್ರ.ಸಂ. (11) ರಲ್ಲಿ ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಈ ಹೇಳಿಕೆಯಲ್ಲಿ ಪರಿಗಣಿಸಬಹುದಾದ ಯಾವುದೇ ಅಂಶಗಳು ಕಂಡು ಬರುವುದಿಲ್ಲ.

ಓದಲಾದ ಕ್ರಮ ಸಂಖ್ಯೆ (12) ರಲ್ಲಿ ಪ್ರಕರಣವನ್ನು ಇತ್ಯರ್ಥಗೊಳಿಸಲು ಸರ್ಕಾರದಿಂದ ಇಲಾಖೆಗೆ ನಿರ್ದೇಶಿತವಾಗಿದೆ. ಅದರಂತೆ ವಿಚಾರಣಾ ವರದಿಯಲ್ಲಿ ಆರೋಪ ಸಾಬೀತಾಗಿರುವುದರಿಂದ ಹಾಗೂ ಓದಲಾದ ಕ್ರಮ ಸಂಖ್ಯೆ (13) ರಲ್ಲಿನ ಸರ್ಕಾರದ ಆದೇಶದನ್ವಯ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ ಸಿಬ್ಬಂದಿ-1/ವಿಚಾರಣೆ-4/20/ಚಾ.ನಗರ/03-04, ದಿನಾಂಕ: 19-11-2008.**

ಈ ಕೆಳಗೆ ಸಹಿ ಮಾಡಿರುವ ಡಾ: ಎ.ರಾಜಣ್ಣ, ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿ, ಬೆಂಗಳೂರು ಆದ ನಾನು ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಕೆ.ಎಂ. ಹರೀಶ, ದ್ವಿತೀಯ ದರ್ಜೆ ಸಹಾಯಕ, ಹಾಲಿ ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಯಳಂದೂರು ಇವರ ವಿರುದ್ಧದ ಆರೋಪವು ವಿಚಾರಣಾ ವರದಿಯಲ್ಲಿ ಸಾಬೀತಾಗಿರುವುದರಿಂದ ಇವರನ್ನು "ದೋಷಿ" ಎಂದು ನಿರ್ಣಯಿಸಿದ್ದು, ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ನಿಯಮ 8 (viii) ರಡಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರದ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿರುತ್ತೇನೆ.

ಸದರಿಯವರ ಅನಧಿಕೃತ ಗೈರು ಹಾಜರಿಯನ್ನು ಅನಧಿಕೃತ ಗೈರು ಹಾಜರಿ ಎಂದು ಪರಿಗಣಿಸಿ ನಿಲಂಬನಾ ಅವಧಿಯನ್ನು ನಿಲಂಬನಾ ಅವಧಿ ಎಂದೇ ಪರಿಗಣಿಸಿ ಆದೇಶಿಸಿರುತ್ತೇನೆ.

**ಡಾ: ಎ. ರಾಜಣ್ಣ**
ಕೃಷಿ ನಿರ್ದೇಶಕರು ಹಾಗೂ ಶಿಸ್ತು ಪ್ರಾಧಿಕಾರಿಗಳು

ಪಿ.ಆರ್. ನಂ. 1395

**ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ : ಡಿ.ಟಿ.ಸಿಆರ್. 20/2007-08, ದಿನಾಂಕ : 22ನೇ ಆಗಸ್ಟ್, 2008**

**ಅಬಕಾರಿ ಉಪ ನಿರೀಕ್ಷಕರು ನಂ. 2, ಜಾ. ಮತ್ತು ತ. ತರೀಕೆರೆ ತಾಲ್ಲೂಕು ಇವರ ಪ್ರ.ವ.ವ.4/07-08, ದಿ: 18-07-2007**

**ಉಪಸ್ಥಿತರು:** ಕೆ.ಸಿ. ಹರಿದಾಸ್, ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

| **ಫಿರ್ಯಾದುದಾರರು** | **ಆಪಾದಿತರು** |
|---|---|
| ಅಬಕಾರಿ ಉಪ ನಿರೀಕ್ಷಕರು ನಂ.2 | ಎ: 1 ಗುರುಮೂರ್ತಿ ಬಿನ್ ದೇವೇಗೌಡ |
| ಜಾರಿ ಮತ್ತು ತನಿಖೆ | ಎ: 2 ದೇವೇಂದ್ರ ನಾಯ್ಕ್ ಬಿನ್ ಲಚ್ಚಾನಾಯ್ಕ್ |
| ತರೀಕೆರೆ ತಾಲ್ಲೂಕು | |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 18-07-2007 ರಂದು ರಾತ್ರಿ 11:30 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ತರೀಕೆರೆ ತಾಲ್ಲೂಕು ಇವರು ಸಿಬ್ಬಂದಿಯೊಂದಿಗೆ ಬಂದ ಖಚಿತ ವರ್ತಮಾನದ ಮೇರೆಗೆ ತರೀಕೆರೆ ತಾಲ್ಲೂಕು ಲಕ್ಕವಳ್ಳಿ ಹೋಬಳಿ ಸಿದ್ಲಿಪುರ ಗ್ರಾಮದ ರಸ್ತೆಯಲ್ಲಿ ರಾತ್ರಿ ಗಸ್ತು ಕಾರ್ಯದಲ್ಲಿದ್ದಾಗ ವಾಹನ ಸಂಖ್ಯೆ: ಕೆ.ಎ. 18 ಇ.8777ರ ಕವಾಸಕಿ ಬಜಾಜ್ ಬೈಕ್‌ನಲ್ಲಿ ಗುರುಮೂರ್ತಿ ಬಿನ್ ದೇವೇಗೌಡ ಮತ್ತು ದೇವೇಂದ್ರ ನಾಯ್ಕ್ ಬಿನ್ ಲಚ್ಚಾನಾಯ್ಕ್, ಕರಕುಚ್ಚಿ ಗ್ರಾಮ, ಲಕ್ಕವಳ್ಳಿ ಹೋಬಳಿ, ತರೀಕೆರೆ ತಾಲ್ಲೂಕು ಇವರುಗಳು ಅಕ್ರಮವಾಗಿ ಒಂದು ಬಿಳಿಯ ಪ್ಲಾಸ್ಟಿಕ್ ಚೀಲದಲ್ಲಿ 180 ಮಿಲಿಯ 60 ಸೀಸೆ ವಿಂಡ್ಸರ್ ಡಿಲಕ್ಸ್ ವಿಸ್ಕಿ ಎಂದು ಲೇಬಲ್ ಇರುವ ಒಟ್ಟು 10.800 ಲೀಟರ್ ನಕಲಿ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಪತ್ತೆಯಾದ್ದರಿಂದ ಮಹಜರ್‌ನಡಿಯಲ್ಲಿ ಸದರಿ ಮದ್ಯವನ್ನು ಬೈಕ್‌ನೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಆರೋಪಿಗಳನ್ನು ದಸ್ತಗಿರಿಗೊಳಿಸಿ ಪ್ರ.ವ.ವ. ನಂ: 4/2007-08 ರಲ್ಲಿ ಮೊಕದ್ದಮೆ ದಾಖಲು ಮಾಡಿ ಪ್ರಥಮ ಮಾಹಿತಿ ವರದಿಯನ್ನು ಘನ ನ್ಯಾಯಾಲಯಕ್ಕೆ ಹಾಗೂ ಈ ಪ್ರಾಧಿಕಾರಕ್ಕೆ ಸಲ್ಲಿಸಿ ತನಿಖೆಯನ್ನು ಮುಂದುವರೆಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಎ) ಅಡಿಯಲ್ಲಿ ಪ್ರಾರಂಭಿಸಿ ಆಪಾದಿತರಿಗೆ / ವಾಹನದ ಮಾಲೀಕರಿಗೆ ಕಲಂ 43 (ಬಿ) ಅಡಿಯಲ್ಲಿ ನೋಟಿಸ್ ಜಾರಿ ಮಾಡಲು ಕ್ರಮ ಕೈಗೊಂಡು ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆದು ಮುಟ್ಟುಗೋಲಿನ ನಡವಳಿಗಳನ್ನು ಮುಂದುವರೆಸಲಾಗಿತ್ತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ಇವರು ನೀಡಿರುವ "ಬಿ" ವರದಿಯ ಪ್ರಕಾರ ಶ್ರೀ ಟಿ.ಎಸ್. ಶಿವಮೂರ್ತಿ ಬಿನ್ ಟಿ.ಸಿ. ಸುಬ್ಬರಾಯಪ್ಪ ಪಂಚಕಲ್ಲಯ್ಯ ಸ್ಟ್ರೀಟ್, ತರೀಕೆರೆ. ಇವರು ವಾಹನದ ಮಾಲೀಕರೆಂದು ತಿಳಿದು ಬಂದಿರುತ್ತದೆ.

ವಾಹನದ ಮಾಲೀಕರಿಗೆ ಕಲಂ 43 (ಬಿ) ಅಡಿಯಲ್ಲಿ ನೋಂದಾಯಿತ ಅಂಚೆ ಮೂಲಕ ನೀಡಲಾದ ನೋಟಿಸ್ ದಿನಾಂಕ: 19–07–2008 ರಂದು ಜಾರಿಯಾದ ಬಗ್ಗೆ ಸ್ವೀಕೃತಿ ಈ ಪ್ರಾಧಿಕಾರಕ್ಕೆ ಮರಳಿ ಬಂದಿದ್ದು, ಮುಂದುವರೆದು ವಾಹನದ ಮಾಲೀಕರು ಮತ್ತು ಆರೋಪಿಗಳಿಗೆ ನೋಟಿಸ್‌ನ್ನು ತನಿಖಾಧಿಕಾರಿಗಳ ಮುಖಾಂತರ ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗಿತ್ತು.

ದಿನಾಂಕ: 02–08–2008 ರಂದು ವಾಹನದ ಮಾಲೀಕರಾದ ಶ್ರೀ ಟಿ.ಎಸ್. ಶಿವಮೂರ್ತಿ ಬಿನ್ ಟಿ.ಸಿ. ಸುಬ್ಬರಾಯಪ್ಪ ಪಂಚಕಲ್ಲಯ್ಯ ಸ್ಟ್ರೀಟ್, ತರೀಕೆರೆ ಎಂದು ಇವರು ಅಬಕಾರಿ ನಿರೀಕ್ಷಕರು, ತರೀಕೆರೆ ವಲಯ ಇವರ ಮುಖಾಂತರ ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ತಮ್ಮ ಅಭ್ಯಂತರವಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಪ್ರಕರಣಕ್ಕೆ ಸಂಬಂಧಿಸಿದಂತೆ ಸ.ಅ.ನಿ. ರವರ ವಾದವನ್ನು ಆಲಿಸಿದ್ದು, ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತಮ್ಮ ವಾದ ಮಂಡಿಸಿರುತ್ತಾರೆ.

ಮೊಕದ್ದಮೆಯು ದಾಖಲಾಗಿ 1 ವರ್ಷ ಕಳೆದಿದ್ದು ವಾಹನದ ಮಾಲೀಕರು ವಾಹನವನ್ನು ಈ ಕೃತ್ಯಕ್ಕೆ ಬಳಸಿಲ್ಲ ಎಂಬುದನ್ನು ಸಾಕ್ಷ್ಯಾಧಾರಗಳ ಮುಖಾಂತರ ಸಾಬೀತುಪಡಿಸದೇ ಇರುವುದರಿಂದ ಮತ್ತು ವಾಹನದ ಮಾಲೀಕರು ಅರ್ಜಿ ಸಲ್ಲಿಸಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ತಮ್ಮ ಅಭ್ಯಂತರವಿರುವುದಿಲ್ಲವೆಂದು ತಿಳಿಸಿರುವ ಅಂಶದಿಂದ ವಾಹನದ ಮಾಲೀಕರಿಗೆ ಗೊತ್ತಿದ್ದೇ ಈ ಕೃತ್ಯವನ್ನು ಎಸಗಿರುವ ಅಂಶವು ಸ.ಅ.ನಿ. ವಾದದಿಂದ ಮೇಲ್ನೋಟಕ್ಕೆ ಸಾಭೀತಾಗುವುದರಿಂದ ಅಲ್ಲದೇ ವಾಹನದ ಮಾಲೀಕರಿಗೆ ಸಾಕಷ್ಟು ಸಮಯಾವಕಾಶ ನೀಡಿದಾಗಲೂ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನದ ಮೇಲೆ ಹಕ್ಕು ಸಾಧಿಸದೇ ಇರುವುದರಿಂದ ಅಲ್ಲದೇ ಜಪ್ತಾಗಿರುವ ವಾಹನವು ಇಲಾಖಾ ವಶದಲ್ಲಿಯೇ ಇದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಹಾಳಾಗಿ ಸರ್ಕಾರದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಹಾಗೂ ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ) ಅಡಿಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡ ಆದೇಶ.

**"ಆದೇಶ"**

ಕೆ.ಸಿ. ಹರಿದಾಸ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಅಬಕಾರಿ ಉಪ ನಿರೀಕ್ಷಕರು ನಂ. 2 ಜಾ. ಮತ್ತು ತ. ತರೀಕೆರೆ ತಾಲ್ಲೂಕು ಇವರ ಮೊಕದ್ದಮೆ ನಂ. 4/2007–08, ದಿನಾಂಕ: 18–07–2007 ರಲ್ಲಿ ಜಪ್ತುಪಡಿಸಿದ ವಾಹನ ಸಂಖ್ಯೆ: ಕೆ.ಎ. 18 ಇ:8777 ಬಜಾಜ್ ಕವಾಸಕಿ ಮೋಟಾರ್ ಬೈಕ್‌ನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 22ನೇ ಆಗಸ್ಟ್ 2008 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕಾರಿಯುತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ,
ಚಿಕ್ಕಮಗಳೂರು.

**ಸಂಖ್ಯೆ : ಡಿ.ಟಿ.ಸಿಆರ್. ನಂ.68/2006–07, ದಿನಾಂಕ : 22ನೇ ಆಗಸ್ಟ್, 2008**

**ಆರಕ್ಷಕ ಉಪ ನಿರೀಕ್ಷಕರು, ಕಳಸ ಪೊಲೀಸ್ ಠಾಣಾ ಮೊಕದ್ದಮೆ ನಂ. 36/ 2006, ದಿನಾಂಕ: 3–4–2006**

**ಉಪಸ್ಥಿತರು:** ಕೆ.ಸಿ. ಹರಿದಾಸ್, ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

| **ಫಿರ್ಯಾದುದಾರರು** | ಆಪಾದಿತರು |
|---|---|
| ಆರಕ್ಷಕ ಉಪ ನಿರೀಕ್ಷಕರು | ಎ: 1 ಎಂ.ಆರ್. ಸುರೇಶ್, ಮರಸಣಿಗೆ |
| ಕಳಸ ಪೊಲೀಸ್ ಠಾಣೆ | ಎ: 2 ತನಿಖೆಯಲ್ಲಿ ತಿಳಿಯಬೇಕಾಗಿದೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 03–04–2006 ರಂದು ಬೆಳಿಗ್ಗೆ 10:30 ಗಂಟೆಗೆ ಆರಕ್ಷಕ ಉಪ ನಿರೀಕ್ಷಕರು, ಕಳಸ ಪೊಲೀಸ್ ಠಾಣೆಯ ಸಿಬ್ಬಂದಿಯವರು ಮೂಡಿಗೆರೆ ತಾಲ್ಲೂಕು ಬಾಳೆಖಾನ್ ಗ್ರಾಮ ಭೇಟಿಗಾಗಿ ಹೋಗುತ್ತಿದ್ದಾಗ ಬಂದ ಖಚಿತ ವರ್ತಮಾನದ ಮೇರೆಗೆ ಮೂಡಿಗೆರೆ ತಾಲ್ಲೂಕು ಕಳಸ ಹೋಬಳಿ, ಕಳಸ ಎಸ್ಟೇಟ್ ಕೆರೆಮನೆ ಕಚ್ಚಿನಹತ್ಲು ರಸ್ತೆಯಲ್ಲಿ ಎಂ.ಆರ್. ಸುರೇಶ್‌ರವರ ಬಾಳೆಖಾನ್ ಕಾಫಿ ತೋಟದಲ್ಲಿರುವ ಉಗ್ರಾಣದ ಮನೆಯ ಹತ್ತಿರ 2 ಜನ ಆಸಾಮಿಗಳು ಭಗನೆ ಸೇಂದಿ ಮಾರಾಟ ಮಾಡುತ್ತಿದ್ದು ನಮ್ಮಗಳ ನೋಡಿದವರು ಓಡಿ ಹೋಗಿರುತ್ತಾರೆ. ಈ ಸಂಬಂಧವಾಗಿ ಸ್ಥಳದಲ್ಲಿದ್ದ ವಾಹನ ಸಂಖ್ಯೆ: ಸಿ.ಟಿ.ಕ್ಯೂ: 3136ರ ಯಮಹ ಆರ್.ಎಕ್ಸ್. 100 ಮೋಟಾರ್ ಸೈಕಲ್‌ನ ಪಕ್ಕದಲ್ಲಿದ್ದ ತಿಳಿ ಹಳದಿ ಬಣ್ಣದ ಪ್ಲಾಸ್ಟಿಕ್ ಕೊಡದಲ್ಲಿ 6 ಲೀಟರ್‌ಗಳಷ್ಟು ಭಗನೆ ಸೇಂದಿ, 20 ಲೀಟರ್ ಸಾಮರ್ಥ್ಯದ ಬಿಳಿ ಪ್ಲಾಸ್ಟಿಕ್ ಕ್ಯಾನ್ ಮತ್ತು ಅಳತೆ ಮಾಡಲು ಮದ್ಯ ಬೀಯರ್ ಬಾಟಲಿಗಳು ಇದ್ದು ಓಡಿ ಹೋದ ಅಸಾಮಿಯ ಹೆಸರು ಎಂ.ಆರ್. ಸುರೇಶ್ ಎಂಬುದಾಗಿ ತಿಳಿದು ಬಂದಿದ್ದು ಇನ್ನೊಬ್ಬ

ಆಸಾಮಿಯ ಹೆಸರು ವಿಳಾಸ ತಿಳಿಯಬೇಕಾಗಿದ್ದು, ಮೇಲ್ಕಾಣಿಸಿರುವ ವಸ್ತುಗಳನ್ನು ವಶಕ್ಕೆ ಪಡೆದುಕೊಂಡು ಠಾಣೆಗೆ ಕರೆತಂದ ನಂತರ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಆರಕ್ಷಕ ಉಪ ನಿರೀಕ್ಷಕರು, ಕಳಸ ಪೊಲೀಸ್ ಠಾಣೆ ಮೂಡಿಗೆರೆ ತಾಲ್ಲೂಕು ಇವರು ಠಾಣಾ ಅಪರಾಧ ಸಂಖ್ಯೆ: 36/2006, ದಿನಾಂಕ: 03–04–2006 ರಂದು ಮೊಕದ್ದಮೆ ದಾಖಲು ಮಾಡಿ ನ್ಯಾಯಾಲಯಕ್ಕೆ ಮತ್ತು ಮೇಲಾಧಿಕಾರಿಗಳಿಗೆ ಸಲ್ಲಿಸಿ ತನಿಖೆಯನ್ನು ಮುಂದುವರೆಸಿ ಪ್ರಕರಣದಲ್ಲಿ ಜಪ್ತುಪಡಿಸಿದ ಸ್ವತ್ತುಗಳನ್ನು ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ, ಮೂಡಿಗೆರೆ ತಾಲ್ಲೂಕು ಇವರಿಗೆ ಹಸ್ತಾಂತರಿಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಎ) ಅಡಿಯಲ್ಲಿ ಪ್ರಾರಂಭಿಸಿ ಆಪಾದಿತರಿಗೆ / ವಾಹನದ ಮಾಲೀಕರಿಗೆ ಕಲಂ 43 (ಬಿ) ಅಡಿಯಲ್ಲಿ ನೋಟಿಸ್ ಜಾರಿ ಮಾಡಲು ಕ್ರಮ ಕೈಗೊಂಡು ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆದು ಮುಟ್ಟುಗೋಲಿನ ನಡವಳಿಗಳನ್ನು ಮುಂದುವರೆಸಲಾಗಿತ್ತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರು ದಿನಾಂಕ: 02–06–2008 ರಂದು ನೀಡಿರುವ "ಬಿ" ವರದಿಯ ಪ್ರಕಾರ ಶ್ರೀ ರಜನೀಶ .ಕೆ ಜಾನ್ ಇಂಪಿರಿಯಲ್ ಟಯರ್ಸ್ ಬಿ.ಹೆಚ್. ರೋಡ್, ಭದ್ರಾವತಿ ಇವರು ವಾಹನದ ಮಾಲೀಕರೆಂದು ತಿಳಿದುಬಂದಿರುತ್ತದೆ.

ವಾಹನದ ಮಾಲೀಕರಿಗೆ ದಿನಾಂಕ: 18–06–2008 ರಂದು ಕಲಂ 43 (ಬಿ) ಅಡಿಯಲ್ಲಿ ನೋಟಿಸ್‌ನ್ನು ನೋಂದಾಯಿತ ಅಂಚೆ ಮೂಲಕ ಜಾರಿ ಮಾಡಲು ಕ್ರಮ ಕೈಗೊಂಡಿದ್ದು, ನೋಟಿಸ್ ಈ ಪ್ರಾಧಿಕಾರಕ್ಕೆ "No such address" ಎಂಬ ಷರಾದೊಂದಿಗೆ ಮರಳಿ ಬಂದಿರುತ್ತದೆ. ಮುಂದುವರೆದು ನೋಟಿಸ್‌ನ್ನು ತನಿಖಾಧಿಕಾರಿಗಳ ಮುಖಾಂತರ ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗಿ ದಿನಾಂಕ: 30–06–2008 ರಂದು ವಾಹನದ ಮಾಲೀಕರಿಗೆ ಜಾರಿಗೊಳಿಸಿ ಸ್ವೀಕೃತಿ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಕರಣಕ್ಕೆ ಸಂಬಂಧಿಸಿದಂತೆ ಸ.ಅ.ನಿ. ರವರ ವಾದವನ್ನು ಆಲಿಸಿದ್ದು, ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತಮ್ಮ ವಾದ ಮಂಡಿಸಿರುತ್ತಾರೆ.

ಮೊಕದ್ದಮೆಯು ದಾಖಲಾಗಿ 2 ವರ್ಷ 4 ತಿಂಗಳುಗಳು ಕಳೆದಿದ್ದು ವಾಹನದ ಮಾಲೀಕರು ವಾಹವನ್ನು ಈ ಕೃತ್ಯಕ್ಕೆ ಬಳಸಿಲ್ಲ ಎಂಬುದನ್ನು ಸಾಕ್ಷ್ಯಾಧಾರಗಳ ಮುಖಾಂತರ ಪ್ರಾಧಿಕಾರದ ಮುಂದೆ ಇದುವರೆವಿಗೂ ತಾವಾಗಲೀ ಅಥವಾ ತಮ್ಮ ನ್ಯಾಯವಾದಿಗಳ ಮುಖಾಂತರವಾಗಲಿ ಹಾಜರಾಗಿ ಸಾಬೀತುಪಡಿಸದೇ ಇರುವುದರಿಂದ ಹಾಗೂ ವಾಹನದ ಮಾಲೀಕರಿಗೆ ಗೊತ್ತಿದ್ದೆ ಈ ಕೃತ್ಯ ನಡೆದಿರುವುದರಿಂದಲೇ ವಾಹನದ ಮಾಲೀಕರಿಗೆ ಕಲಂ 43 (ಬಿ) ನೋಟೀಸ್‌ಗೆ ಸಮಜಾಯಿಷಿ ನೀಡಲು ಸಾಕಷ್ಟು ಸಮಯಾವಕಾಶ ನೀಡಿದಾಗಲೂ ವಾಹನದ ಬಗ್ಗೆ ಯಾವುದೇ ಆಸಕ್ತಿ ತೋರಿಸದೇ ಇರುವ ಅಂಶವು ಸ.ಅ.ನಿ. ವಾದದಿಂದ ಮೇಲ್ನೋಟಕ್ಕೆ ಸಾಭೀತಾಗುವುದರಿಂದ ಅಲ್ಲದೇ ವಾಹನದ ಮಾಲೀಕರಿಗೆ ಸಾಕಷ್ಟು ಸಮಯಾವಕಾಶ ನೀಡಿದಾಗಲೂ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನದ ಮೇಲೆ ಹಕ್ಕು ಸಾಧಿಸದೇ ಇರುವುದರಿಂದ ಅಲ್ಲದೆ ಜಪ್ತಾಗಿರುವ ವಾಹನವು ಇಲಾಖಾ ವಶದಲ್ಲಿಯೇ ಇದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಹಾಳಾಗಿ ಸರ್ಕಾರದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಹಾಗೂ ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ) ಅಡಿಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡ ಆದೇಶ

**"ಆದೇಶ"**

ಕೆ.ಸಿ. ಹರಿದಾಸ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಆರಕ್ಷಕ ಉಪ ನಿರೀಕ್ಷಕರು ಕಳಸ ಪೊಲೀಸ್ ಠಾಣಾ ಮೊಕದ್ದಮೆ ಸಂಖ್ಯೆ 36/2006 ದಿನಾಂಕ: 03–04–2006 ರಲ್ಲಿ ಜಫ್ತುಪಡಿಸಿದ ವಾಹನ ಸಂಖ್ಯೆ: ಸಿ.ಟಿ.ಕ್ಯೂ. 3136ರ ಯಮಹ ಆರ್‌ಎಕ್ಸ್ 100 ಮೋಟಾರ್ ಬೈಕ್‌ನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 22ನೇ ಆಗಸ್ಟ್ 2008 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕಾರಿಯುತ ಅಧಿಕಾರಿಗಳು ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ,
ಚಿಕ್ಕಮಗಳೂರು.

**ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ : ಡಿ.ಟಿ.ಸಿಆರ್. ನಂ.51/2007–08, ದಿನಾಂಕ : 22ನೇ ಆಗಸ್ಟ್, 2008**

**ಇ ಅಂಡ್ ಐ/ ಟಿಕೆಆರ್/ ಟಿಕ್ಯೂ/ ಎಸ್ಐಇ:2/ಪ್ರ.ವ.ವ. ನಂ. 7/2007–08, ದಿನಾಂಕ: 16–08–2007**

**ಉಪಸ್ಥಿತರು:** ಕೆ.ಸಿ. ಹರಿದಾಸ್, ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

**ಫಿರ್ಯಾದುದಾರರು**
ಅಬಕಾರಿ ಉಪ ನಿರೀಕ್ಷಕರು
ಜಾರಿ ಮತ್ತು ತನಿಖೆ
ತರೀಕೆರೆ ತಾಲ್ಲೂಕು

**ಆಪಾದಿತರು**
ಎ: 1 ಮಣಿ ಮುರುಗನ್ ಬಿನ್ ಕಣ್ಣಪ್ಪ, ತಮಿಳು ಜನಾಂಗ, ಸಿದ್ದಿಪುರ ಗ್ರಾಮ ಕರಕುಚ್ಚಿ ಅಂಚೆ, ತರೀಕೆರೆ ತಾಲ್ಲೂಕು

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 16–08–2007 ರಂದು ಮಧ್ಯಾಹ್ನ ಸುಮಾರು 1:15 ಗಂಟೆಯ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು ತಮ್ಮ ಸಿಬ್ಬಂದಿಯೊಂದಿಗೆ ಎಂ.ಸಿ. ಹಳ್ಳಿ – ಹುರುಳಿಬಾರೆ ಗ್ರಾಮಕ್ಕೆ ಹೋಗುವ ರಸ್ತೆಯಲ್ಲಿ ದೊರೆತ ಖಚಿತ ವರ್ತಮಾನದ ಮೇರೆಗೆ ಪಂಚಾಯ್ತಿದಾರರೊಂದಿಗೆ ಗಸ್ತು ಮಾಡುತ್ತಿದ್ದಾಗ ಒಬ್ಬ ಆಸಾಮಿಯು ಒಂದು ಟಿ.ವಿ.ಎಸ್.–50 ವಾಹನ ಸಂಖ್ಯೆ: ಕೆ.ಎ. 14–ಹೆಚ್:1961 ಮೋಟಾರ್ ಸೈಕಲ್‌ನಲ್ಲಿ ಬರುತ್ತಿರುವುದನ್ನು ಕಂಡು, ತಡೆದು ನಿಲ್ಲಿಸಿ ಪರಿಶೀಲಿಸಿದಾಗ ಒಂದು ವಿಮಲ್ ಗುಟ್ಕಾ ಚೀಲದಲ್ಲಿ 180 ಮಿಲಿಯ 20 ಸೀಸೆ ಸೂಪರ್ ಜಾಕ್ ವಿಸ್ಕಿ ಹಾಗೂ 180 ಮಿಲಿಯ 10 ಸೀಸೆ ಕ್ಯಾಪ್ಟನ್ ಮಾರ್ಟಿನ್ ವಿಸ್ಕಿ ಇರುವುದು ಕಂಡು ಬಂದಿದ್ದು, ಇವುಗಳ ಸಾಗಾಣಿಕೆ ಬಗ್ಗೆ ವಾಹನ ಚಾಲನೆ ಮಾಡುತ್ತಿದ್ದ ವ್ಯಕ್ತಿ ಮಣಿಮುರುಗನ್ ಬಿನ್ ಕಣ್ಣಪ್ಪ, 25 ವರ್ಷ, ತಮಿಳು ಜನಾಂಗ, ಅಂಗಡಿ ವ್ಯಾಪಾರ ಕೆಲಸ ಸಿದ್ದಿಪುರ ಗ್ರಾಮ ವಾಸ, ಕರಕುಚ್ಚಿ ಗ್ರಾಮ, ತರೀಕೆರೆ ತಾಲ್ಲೂಕು ಇವರು ಯಾವುದೇ ರಹದಾರಿ ಹಾಜರುಪಡಿಸದೇ ಇದ್ದುದರಿಂದ ಅಕ್ರಮವಾದುದೆಂದು ದೃಢಪಡಿಸಿಕೊಂಡು ದೊರೆತ ಮದ್ಯವನ್ನು ವಾಹನದೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಆರೋಪಿಯನ್ನು ದಸ್ತಗಿರಿಗೊಳಿಸಿ, ಆರೋಪಿ ವಿರುದ್ಧ ಪ್ರ.ವ.ವ. ನಂ.2/2007–08ರಲ್ಲಿ ಮೊಕದ್ದಮೆಯನ್ನು ದಾಖಲಿಸಿ, ಪ್ರ.ವ.ವ.ನ್ನು ಘನ ನ್ಯಾಯಾಲಯಕ್ಕೂ ಹಾಗೂ ಮೇಲಾಧಿಕಾರಿಗಳಿಗೂ ಸಲ್ಲಿಸಿ, ತನಿಖೆಯನ್ನು ಮುಂದುವರೆಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಎ) ಅಡಿಯಲ್ಲಿ ಪ್ರಾರಂಭಿಸಿ ಆಪಾದಿತರಿಗೆ / ವಾಹನದ ಮಾಲೀಕರಿಗೆ ಕಲಂ 43 (ಬಿ) ಅಡಿಯಲ್ಲಿ ನೋಟಿಸ್ ಜಾರಿ ಮಾಡಲು ಕ್ರಮ ಕೈಗೊಂಡು ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಪತ್ರ ಬರೆದು ಮುಟ್ಟುಗೋಲಿನ ನಡವಳಿಗಳನ್ನು ಮುಂದುವರೆಸಲಾಗಿತ್ತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಇವರು ನೀಡಿರುವ "ಬಿ" ವರದಿಯ ಪ್ರಕಾರ ಶ್ರೀ ನಾರಾಯಣ ಪಿ. ಶೇಟ್ ಬಿನ್ ಗುರು ಶೇಟ್, ಹೆಚ್. ಸಿದ್ದಯ್ಯ ರೋಡ್, ಶಿವಮೊಗ್ಗ ಇವರು ವಾಹನದ ಮಾಲೀಕರೆಂದು ತಿಳಿದುಬಂದಿರುತ್ತದೆ.

ವಾಹನದ ಮಾಲೀಕರಿಗೆ ಕಲಂ 43 (ಬಿ) ಅಡಿಯಲ್ಲಿ ನೋಂದಾಯಿತ ಅಂಚೆ ಮೂಲಕ ನೀಡಲಾದ ನೋಟೀಸ್ ಜಾರಿಯಾಗದೇ ಈ ಪ್ರಾಧಿಕಾರಕ್ಕೆ ಮರಳಿ ಬಂದಿದ್ದು, ಮುಂದುವರೆದು ವಾಹನದ ಮಾಲೀಕರಿಗೆ ನೋಟಿಸ್‌ನ್ನು ತನಿಖಾಧಿಕಾರಿಗಳ ಮುಖಾಂತರ ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗಿ, ವಾಸ ಸ್ಥಳ ತಿಳಿದು ಬಂದಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಸ.ಅ.ನಿ. ರವರ ವಾದವನ್ನು ಆಲಿಸಿದ್ದು, ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ತಮ್ಮ ವಾದ ಮಂಡಿಸಿರುತ್ತಾರೆ.

ಮೊಕದ್ದಮೆಯು ದಾಖಲಾಗಿ 1 ವರ್ಷ ಕಳೆದಿದ್ದು ವಾಹನದ ಮಾಲೀಕರು ವಾಹನವನ್ನು ಈ ಕೃತ್ಯಕ್ಕೆ ಬಳಸಿಲ್ಲ ಎಂಬುದನ್ನು ಸಾಕ್ಷ್ಯಾಧಾರಗಳ ಮುಖಾಂತರ ಪ್ರಾಧಿಕಾರದ ಮುಂದೆ ಇದುವರೆವಿಗೂ ತಾವಾಗಲೀ ಅಥವಾ ತಮ್ಮ ನ್ಯಾಯಾವಾದಿಗಳ ಮುಖಾಂತರವಾಗಲಿ ಹಾಜರಾಗಿ ಸಾಬೀತುಪಡಿಸದೇ ಇರುವುದರಿಂದ ಹಾಗೂ ವಾಹನದ ಮಾಲೀಕರಿಗೆ ಗೊತ್ತಿದ್ದೇ ಈ ಕೃತ್ಯ ನಡೆದಿರುವುದರಿಂದಲೇ ವಾಹನದ ಮಾಲೀಕರು ವಾಹನದ ಬಗ್ಗೆ ಯಾವುದೇ ಆಸಕ್ತಿ ತೋರಿಸದೆ ಇರುವ ಅಂಶವು ಸ.ಅ.ನಿ. ವಾದದಿಂದ ಮೇಲ್ನೋಟಕ್ಕೆ ಸಾಬೀತಾಗುವುದರಿಂದ ಅಲ್ಲದೇ ವಾಹನದ ಮಾಲೀಕರಿಗೆ ಸಾಕಷ್ಟು ಸಮಯಾವಕಾಶ ನೀಡಿದಾಗಲೂ ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನದ ಮೇಲೆ ಹಕ್ಕು ಸಾಧಿಸದೇ ಇರುವುದರಿಂದ ಅಲ್ಲದೆ ಜಪ್ತಾಗಿರುವ ವಾಹನವು ಇಲಾಖಾ ವಶದಲ್ಲಿಯೇ ಇದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಹಾಳಾಗಿ ಸರ್ಕಾರದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಹಾಗೂ ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ) ಅಡಿಯಲ್ಲಿ ವಶಪಡಿಸಿಕೊಂಡ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡ ಆದೇಶ.

**"ಆದೇಶ"**

ಕೆ.ಸಿ. ಹರಿದಾಸ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಅಬಕಾರಿ ಸಬ್ ಇನ್ಸ್‌ಪೆಕ್ಟರ್ ನಂ.2, ಇ ಅಂಡ್ ಐ ತರೀಕೆರೆ ಇವರ ಪ್ರ.ವ.ವ. ನಂ.7/2007–08, ದಿನಾಂಕ:16–08–2007 ರಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ : ಕೆ.ಎ. 14 – ಹೆಚ್ : 1961 ರ ಟಿ.ವಿ.ಎಸ್. 50

ಮೋಟಾರ್ ಸೈಕಲ್ ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 22ನೇ ಆಗಸ್ಟ್ 2008 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕಾರಿಯುತ ಅಧಿಕಾರಿಗಳು ಹಾಗೂ
ಪಿಆರ್.1043 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ,
ಚಿಕ್ಕಮಗಳೂರು.

**ಪಂಚಾಯತ್ ರಾಜ್ ಇಂಜಿನೀಯರಿಂಗ್ ಇಲಾಖೆ**

**ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್‌ರವರ ಕಛೇರಿ, ಪಂಚಾಯತ್ ಇಂಜಿನೀಯರಿಂಗ್ ಉಪ–ವಿಭಾಗ, ಹಿರೇಕೆರೂರ**

**ಸಂ : ಸಕಾನಿಇಂ/ಪಂರಾಇ/ಮಾಹಾ/2007–08, ದಿನಾಂಕ, 7ನೇ ಫೆಬ್ರವರಿ, 2008**

2005ರ ಮಾಹಿತಿ ಹಕ್ಕು ಅದಿನಿಯಮ (2005ರ ಕೇಂದ್ರ ಕಾಯ್ದೆ 22) ರ ಅಡಿಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪವಿಭಾಗ, ಹಿರೇಕೆರೂರ ಕಛೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ ಸದರೀ ಅಧಿನಿಯಮದ ಸೆಕ್ಷನ್–5(1) ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಅಧಿಕಾರಿಗಳನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ" ಮತ್ತು ಸೆಕ್ಷನ್ 5 (2) ರಡಿಯಲ್ಲಿ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಸೆಕ್ಷನ್–19(1)ರಡಿಯಲ್ಲಿ "ಮೇಲ್ಮನವಿ ಪ್ರಾಧಿಕಾರ" ಎಂದು ನೇಮಕ ಮಾಡಲಾಗಿದೆ.

| ಕ್ರ. ಸಂ. | ಕಛೇರಿ ಮತ್ತು ಪೂರ್ಣ ವಿಳಾಸ | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ್ 5 (2) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್ 19 (1) |
|---|---|---|---|---|
| 1 | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪವಿಭಾಗ, ಹಿರೇಕೆರೂರ | ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್ ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪವಿಭಾಗ, ಹಿರೇಕೆರೂರ | ಕಿರಿಯ ಇಂಜಿನೀಯರ್ (ಸೇವೆಯಲ್ಲಿ ಹಿರಿಯರು) ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪವಿಭಾಗ, ಹಿರೇಕೆರೂರ | ಕಾರ್ಯ ನಿರ್ವಾಹಕ ಇಂಜಿನೀಯರ್ ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ, ಹಾವೇರಿ |

**ವಿ.ಕೆ. ಟಿಕಾರೆ**
ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್
ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪವಿಭಾಗ, ಹಿರೇಕೆರೂರ

**ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005 (ಭಾರತ ಸರ್ಕಾರ)**

**ಕರ್ನಾಟಕ ಸರ್ಕಾರ**

**ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪವಿಭಾಗ, ಹಿರೇಕೆರೂರ**

**ಕೈಪಿಡಿ 1 : ಸಂಸ್ಥೆಯ ವಿವರಗಳು ಮತ್ತು ಕರ್ತವ್ಯ ಮತ್ತು ವಿಧಿಗಳು**

ಕರ್ನಾಟಕ ರಾಜ್ಯದಲ್ಲಿನ ಹಾವೇರಿ ಜಿಲ್ಲೆಯ ಹಿರೇಕೆರೂರ ತಾಲ್ಲೂಕಿನ ಪಂಚಾಯತ್ ರಾಜ್ ಇಂಜಿನೀಯರಿಂಗ್ ಇಲಾಖೆ ವ್ಯಾಪ್ತಿಯ ರಸ್ತೆಗಳ ನಿರ್ಮಾಣ ನಿರ್ವಹಣೆ ಮತ್ತು ದುರಸ್ತಿ ಕಾಮಗಾರಿಗಳನ್ನು ಮತ್ತು ಪಂಚಾಯತ್ ರಾಜ್ ಇಂಜಿನೀಯರಿಂಗ್ ಇಲಾಖೆಯ ಸರ್ಕಾರಿ ಕಛೇರಿ ಕಟ್ಟಡಗಳ ನಿರ್ಮಾಣ ಹಾಗೂ ನಿರ್ವಹಣೆ ಕೆಲಸಗಳನ್ನು ಹಾಗೂ ಕುಡಿಯುವ ನೀರಿನ ವ್ಯವಸ್ಥೆಯನ್ನು ಸುಗಮವಾಗಿ ಹಾಗೂ ಸುವ್ಯವಸ್ಥಿತವಾಗಿ ನಿರ್ವಹಿಸುವ ದೃಷ್ಠಿಯಿಂದ 01/07/1987 ರಿಂದ ಅಸ್ತಿತ್ವಕ್ಕೆ ಬಂದಿರುತ್ತದೆ. ಈ ಉಪ–ವಿಭಾಗ ಭೌಗೋಳಿಕ ವಿಸ್ತೀರ್ಣವು ಚದರ ಕಿ.ಮೀ. ಇರುತ್ತದೆ ಮತ್ತು 2001 ರ ಜನಗಣತಿಯ ಪ್ರಕಾರ 196482 ಜನಸಂಖ್ಯೆ ಇರುತ್ತದೆ. ಈ ಉಪ–ವಿಭಾಗವು ಕಾರ್ಯನಿರ್ವಾಹಕ ಇಂಜಿನೀಯರ್ ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ, ಹಾವೇರಿ ಅಧೀಕ್ಷಕ ಇಂಜಿನೀಯರ್ ಪಂಚಾಯತ್ ರಾಜ್ ಇಂಜಿನೀಯರಿಂಗ್ ಇಲಾಖೆ ಧಾರವಾಡ ವೃತ್ತ, ಧಾರವಾಡ ಹಾಗೂ ಮುಖ್ಯ ಇಂಜಿನೀಯರ್ ಪಂಚಾಯತ್ ರಾಜ್

ಇಂಜಿನೀಯರಿಂಗ್ ಇಲಾಖೆ ಬೆಂಗಳೂರು ಇವರ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಿದೆ. ಈ ಉಪ–ವಿಭಾಗದಡಿಯಲ್ಲಿ 2007–08 ರ ಪ್ರಕಾರ ರಸ್ತೆ ಮತ್ತು ಸೇತುವೆ ಮತ್ತು ಕಟ್ಟಡಗಳ ವಿವರ ಹಾಗೂ ಕುಡಿಯುವ ನೀರಿನ ಮಾಹಿತಿಯು ಈ ಕೆಳಗಿನಂತಿರುತ್ತದೆ.

ಅ) ರಸ್ತೆ

| | |
|---|---|
| 1) ಗ್ರಾಮೀಣ ರಸ್ತೆಗಳು | ಕಿ.ಮೀ. 372.40 |
| ಬ) ಸೇತುವೆಗಳು | |
| 1) ಸಣ್ಣ ಸೇತುವೆಗಳು | 300 |
| 2) ಅಡ್ಡ ಮೋರಿಗಳು | 700 |
| ಕ) ಕಟ್ಟಡಗಳು | |
| 1) ಮುಖ್ಯ ಕಟ್ಟಡಗಳು | 13 |
| 2) ಸಣ್ಣ ಕಟ್ಟಡಗಳು | – |
| ಡ) ಕುಡಿಯುವ ನೀರು | |
| 1) ನೀರು ಸರಬರಾಜು ಯೋಜನೆಗಳು ನಂ. | 101 |
| 2) ಕಿರುನೀರು ಸರಬರಾಜು ಯೋಜನೆಗಳು ನಂ. | 145 |
| 3) ಕೈಪಂಪು ಕೊಳವೆ ಬಾವಿಗಳು ನಂ. | 374 |

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಇವರು ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪವಿಭಾಗ, ಹಿರೇಕೆರೂರು ಕಛೇರಿಯ ಮುಖ್ಯಸ್ಥರಾಗಿರುತ್ತಾರೆ. ಇವರ ಅಧೀನದಲ್ಲಿ 4 ಶಾಖೆಗಳು ಕಾರ್ಯನಿರ್ವಹಿಸುತ್ತವೆ.

1) ತಾಂತ್ರಿಕ ಶಾಖೆ
2) ಆಡಳಿತ ಶಾಖೆ
3) ಲೆಕ್ಕ ಶಾಖೆ
4) ಉಗ್ರಾಣ ಶಾಖೆ

1) ತಾಂತ್ರಿಕ ಶಾಖೆ : ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಈ ಉಪವಿಭಾಗ ಕಾರ್ಯಾಲಯ ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಎಲ್ಲ ಕಾರ್ಯಗಳ ಕಾರ್ಯಭಾರವನ್ನು ಹೊಂದಿದ್ದು ಇವರ ಸಹಾಯಕ್ಕಾಗಿ ಸ.ಇಂ–02 ಕಿ.ಇಂ–05 ಅದರಲ್ಲಿ ಸ.ಇಂ. ಹುದ್ದೆ ಖಾಲಿ ಇರುತ್ತದೆ ಕೆಲಸ ನಿರೀಕ್ಷಕರು 05 ಕಾರ್ಯನಿರ್ವಹಿಸುತ್ತಾರೆ.

1) ಉದ್ದೇಶಿಸುವ ರಸ್ತೆ ಸೇತುವೆ ಮತ್ತು ಕಟ್ಟಡ ಕಾಮಗಾರಿಗಳ ನಿರ್ಮಾಣ ಹಾಗೂ ನಿರ್ವಹಣೆ ಹಾಗೂ ಪರಿವೀಕ್ಷಣೆ ಹಾಗೂ ತಾಂತ್ರಿಕವಾಗಿ ಪರಿಶೀಲಿಸುವುದು.
2) ಅಂದಾಜು ಪಟ್ಟಿ ಹಾಗೂ ವಿನ್ಯಾಸಗಳನ್ನು ತಯಾರಿಸಿ ಆಡಳಿತಾತ್ಮಕ ಅನುಮೋದನೆಗಾಗಿ ಹಾಗೂ ತಾಂತ್ರಿಕ ಮಂಜೂರಾತಿಗಾಗಿ ವಿಭಾಗ ಕಛೇರಿಗೆ ಸಲ್ಲಿಸುವುದು.
3) ಯೋಜನೆಗಳ ಅನುಷ್ಠಾನದ ಪ್ರಗತಿ ಪತ್ರಿಕೆಗಳನ್ನು ತಯಾರಿಸಿ ವಿಭಾಗ ಕಛೇರಿಗೆ ಸಲ್ಲಿಸುವುದು.
4) ಎಂ.ಎಂ.ಆರ್ ಮತ್ತು ಕೆ.ಡಿ.ಪಿ. ಸಭೆಗಳಿಗೆ ಪ್ರಗತಿ ವರದಿ ತಯಾರಿಸುವುದು.
5) ಕಾಮಗಾರಿಗಳ ಕಾರ್ಯಕ್ರಮ ಪಟ್ಟಿ ತಯಾರಿಸುವುದು ಹಾಗೂ ಅನುಮೋದನೆ ಪಡೆಯುವುದು.
6) ತಾಲ್ಲೂಕು ಮಟ್ಟದ ಕೆ.ಡಿ.ಪಿ. ಸಭೆಗೆ ಪ್ರಗತಿ ವರದಿ ತಯಾರಿಸಿ ಹಾಗೂ ಹಾಜರಾಗುವುದು.
7) ಯೋಜನೆಗಳ ನಿರ್ಮಾಣದ ಪಾವತಿಗಳನ್ನು ನಮೂದಿಸಿ ತಯಾರಿಸಿ ವಿಭಾಗ ಕಛೇರಿಗೆ ಸಲ್ಲಿಸುವುದು.

2) ಆಡಳಿತ ಶಾಖೆ : ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪ ವಿಭಾಗ, ಹಿರೇಕೆರೂರ ಕಛೇರಿಯಲ್ಲಿ ಮಂಜೂರಾದ ಹುದ್ದೆಗಳು ಒಟ್ಟು 27 ಹಾಗೂ ಹೆಚ್ಚುವರಿ ಸೂಪರ್‌ನ್ಯೂಮರರಿ ಹುದ್ದೆಗಳು 2 ಒಟ್ಟು 29 ಹುದ್ದೆಗಳು ಇದ್ದು, ಅವುಗಳಲ್ಲಿ ಮಂಜೂರಾದ ಹುದ್ದೆಗಳಲ್ಲಿ 27 ಹಾಗೂ ಹೆಚ್ಚುವರಿ ಹುದ್ದೆಗಳಲ್ಲಿ 2 ಒಟ್ಟು 29 ಜನ ಸಿಬ್ಬಂದಿಯವರು ಕಾರ್ಯನಿರ್ವಹಿಸುತ್ತಿದ್ದಾರೆ. ಈ ಸಂಖ್ಯೆಗಳ ಪೈಕಿ ಹಾಲಿ ಕಾರ್ಯ ನಿರ್ವಹಿಸುತ್ತಿರುವ ವರ್ಗ ಎ–1 ಸಿ–14 ಮತ್ತು ಡಿ–3 ಮಂಜೂರಾದ ಹುದ್ದೆಗಳಲ್ಲಿದ್ದರೆ ಹೆಚ್ಚುವರಿ ಹಾಗೂ ಸೂಪರ್‌ನ್ಯೂಮರರಿ ಹುದ್ದೆಯಲ್ಲಿ ಸಿ–2 ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ.

ಆಡಳಿತ ಶಾಖೆಯಲ್ಲಿ ಇಬ್ಬರು ದ್ವಿತೀಯ ದರ್ಜೆ ಸಹಾಯಕರು ಕಾರ್ಯನಿರ್ವಹಿಸುತ್ತಿದ್ದು ಇವರಲ್ಲಿ ಒಬ್ಬರು ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳು ಹಾಗೂ ಸಿಬ್ಬಂದಿ ವೇತನಬಿಲ್ಲು, ವಿದ್ಯುತ್ಚ್ಛಕ್ತಿ ಮತ್ತು ದೂರವಾಣಿ ಬಿಲ್ಲು ಹಾಗೂ ಸದರಿ ನೌಕರರ ರಜೆ ಇತ್ಯಾದಿಗಳು ನಿರ್ವಹಣೆ ಮತ್ತು ಸಿಬ್ಬಂದಿಗೆ ಸಂಬಂಧಪಟ್ಟ ನಿಯತಕಾಲಿಕೆಗಳನ್ನು ಸಲ್ಲಿಸುವ ಕಾರ್ಯಗಳನ್ನು ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಇವರ ಆದೇಶಗಳ ಮೇರೆಗೆ ಕಾರ್ಯನಿರ್ವಹಿಸುತ್ತಾರೆ. ಈ ಆಡಳಿತ ಶಾಖೆಯಲ್ಲಿ ನಿರ್ವಹಿಸುವ ಸಂಕ್ಷಿಪ್ತ ಕೆಲಸಗಳ ವಿವರಗಳನ್ನು ಈ ಕೆಳಕಂಡಂತೆ ನೀಡಲಾಗಿದೆ.

1. ಆಡಳಿತ ಶಾಖೆಯ ಆಡಳಿತಕ್ಕೆ ಸಂಬಂಧಪಟ್ಟಂತೆ ನೌಕರರ ಸೇವಾ ವಿವರಗಳು ಹಾಗೂ ಬಡ್ತಿಗಳು ಮತ್ತು ನಿವೃತ್ತಿ, ಪಿಂಚಣಿ ರಜೆ ವಗ್ಯೆರೆಗಳಿಗೆ ದಾಖಲೆಗಳನ್ನು ಸಲ್ಲಿಸುವುದು, ಮತ್ತು ನಿರ್ವಹಿಸುವುದು.
2. ಸಿಬ್ಬಂದಿ ವರ್ಗದ ವೇತನ ಬಿಲ್ಲುಗಳನ್ನು ಹಾಗೂ ಸಾದಿಲ್ವಾರು ಬಿಲ್ಲುಗಳನ್ನು ಸಿದ್ಧಪಡಿಸುವುದು ಮತ್ತು ಸಂಬಂಧ ಪಟ್ಟಂತೆ ಅನುದಾನ ವಗ್ಯೆರೆಗಳನ್ನು ಬಿಲ್ಲುಗಳಿಗೆ ಸಕ್ಷಮ ಅಧಿಕಾರಿಗೆ ಅನುಮೋದನೆ ಪಡೆದ ನಂತರವೇ ನಗದೀಕರಣಕ್ಕೆ ಸಲ್ಲಿಸುವುದು.
3. ನೌಕರರ ವಾರ್ಷಿಕ ವರದಿಗಳಾದ ಆಸ್ತಿ ಮತ್ತು ಹೊಣೆಗಾರಿಕೆ ಹಾಗೂ ಕಾರ್ಯನಿರ್ವಹಣಾ ವರದಿಗಳನ್ನು ನೌಕರರಿಂದ ಪಡೆದು ಮೇಲಾಧಿಕಾರಿಗಳ ಅವಗಾಹನೆಗೆಗಾಗಿ ಸಲ್ಲಿಸುವುದು.
4. ಆಡಳಿತಕ್ಕೆ ಸಂಬಂಧಿಸಿದಂತೆ ಉಪವಿಭಾಗದ ಆಯವ್ಯಯ ಅಂದಾಜು ಪಟ್ಟಿಯ ವಿವರಗಳನ್ನು ಮೇಲಾಧಿಕಾರಿಗಳಿಗೆ ಸಲ್ಲಿಸಲು ಸಿದ್ಧಪಡಿಸುವುದು. ಹಾಗೂ ರವಾನೆ ಮತ್ತು ಸ್ವೀಕೃತಿ ಹಾಗೂ ಅಂಚೆ ಚೀಟಿ ದಾಸ್ತಾನು ನಿರ್ವಹಣೆ ನಿರ್ವಹಿಸುತ್ತಾರೆ.

**3) ಲೆಕ್ಕ ಪತ್ರ ಶಾಖೆ :-** ಈ ಶಾಖೆಯಲ್ಲಿ ಒಬ್ಬ ಪ್ರಥಮ ದರ್ಜೆ ಸಹಾಯಕರು ಕೆಲಸ ನಿರ್ವಹಿಸುತ್ತಾರೆ. ಉಪವಿಭಾಗಕ್ಕೆ ಸಂಬಂಧ ಪಟ್ಟಂತೆ ಕಾಮಗಾರಿಗಳ ನಗದು ಪುಸ್ತಕಗಳ ನಿರ್ವಹಣೆ, ಬಾಕಿ ಬಿಲ್ಲುಗಳ ಪರಿಶೀಲನೆಯೊಂದಿಗೆ ವಿಭಾಗ ಕಛೇರಿಗೆ ಸಲ್ಲಿಸುವುದು. ಹಣ ಭರವಸೆ ಮತ್ತು ಬೇಡಿಕೆ ಪತ್ರ ಸಲ್ಲಿಸುವುದು, ಇದಲ್ಲದೇ ಲೆಕ್ಕ ಪತ್ರ ಶಾಖೆಗೆ ಸಂಬಂಧಿಸಿದ ಎಲ್ಲ ಪತ್ರ ವ್ಯವಹಾರಗಳನ್ನು ನಿರ್ವಹಿಸುವುದು.

**4) ಉಗ್ರಾಣ ಶಾಖೆ :-** ಈ ಶಾಖೆಯಲ್ಲಿ ಒಬ್ಬ ದ್ವಿತೀಯ ದರ್ಜೆ ಸಹಾಯಕರು ಕೆಲಸ ನಿರ್ವಹಿಸುತ್ತಿದ್ದಾರೆ. ದಾಸ್ತಾನು ಸಾಮಗ್ರಿಗಳ ಹಾಗೂ ಯಂತ್ರೋಪಕರಣ ಸಾಮಗ್ರಿಗಳು ಹಾಗೂ ಸ್ಥಿರ ಸಾಮಗ್ರಿಗಳ ಪತ್ರ ವ್ಯವಹಾರ ಹಾಗೂ ಅವಶ್ಯವಿದ್ದಲ್ಲಿ ವಿಭಾಗ ಕಛೇರಿಗೆ ಬೇಡಿಕೆ ಪತ್ರ ಸಲ್ಲಿಸುವುದು. ಕಛೇರಿಗೆ ಅವಶ್ಯವಿರುವ ಲೇಖನಿ ಸಾಮಗ್ರಿಗಳನ್ನು ಖರೀದಿಸುವುದು. ನಿರುಪಯುಕ್ತ ಸಾಮಗ್ರಿಗಳ ಬಗ್ಗೆ ಸರ್ವೆ ವರದಿಗಳನ್ನು ಸಲ್ಲಿಸುವುದು ಉಗ್ರಾಣಕ್ಕೆ ಸಂಬಂಧ ಪಟ್ಟ ಲೆಕ್ಕ ಪತ್ರ ಮಾಹಿತಿಗಳನ್ನು ವಿಭಾಗ ಕಛೇರಿಗೆ ಸಲ್ಲಿಸುವುದು.

ಕೈಪಿಡಿ :- 2) ಸಂಸ್ಥೆಯ ಅಧಿಕಾರ ಮತ್ತು ಸಿಬ್ಬಂದಿ ವರ್ಗದ ಅಧಿಕಾರ ಮತ್ತು ವಿಧಿಗಳ ವಿವರ.

ಸಹಾಯಕ ಕಾರ್ಯನಿರ್ವಾಹಕ ಇಂಜೀನಿಯರರ ಕಾರ್ಯಭಾರ ಈ ಕೆಳಗಿನಂತಿವೆ.

1. ಕಾಮಗಾರಿಗಳ ಅಳತೆಗಳನ್ನು ಪರಿಶೀಲನೆ ಮಾಡುವುದು.
2. ಮೇಲಾಧಿಕಾರಿಗಳ ತಪಾಸಣೆಯ ಟಿಪ್ಪಣಿಗಳಿಗೆ ಅನುಸರಣಾ ವರದಿ ಸಲ್ಲಿಸುವುದು.
3. ಉಪವಿಭಾಗದ ಸಿಬ್ಬಂದಿ ವಿಷಯ, ಲೆಕ್ಕ ಪತ್ರ ವಿಷಯ, ತಾಂತ್ರಿಕ ವಿಷಯ ಹಾಗೂ ಉಗ್ರಾಣ ವಿಷಯಗಳಿಗೆ ಸಂಬಂಧಿಸಿದ ವ್ಯವಹಾರಗಳನ್ನು ನಿರ್ವಹಿಸುವಲ್ಲಿ ಜವಾಬ್ದಾರರಾಗಿರುತ್ತಾರೆ.
4. ಉಪವಿಭಾಗದಲ್ಲಿ ಸಹಾಯಕ ಇಂಜಿನೀಯರರು, ಕಿರಿಯ ಇಂಜಿನೀಯರರು, ಪ್ರಥಮ ದರ್ಜೆ ಸಹಾಯಕರು, ದ್ವಿತೀಯ ದರ್ಜೆ ಸಹಾಯಕರು ಹಾಗೂ ಕೆಲಸ ತಪಾಸಿಗರು ಉಪವಿಭಾಗದ ಕೆಲಸಗಳನ್ನು ಜವಾಬ್ದಾರಿಯುತವಾಗಿ ಕೆಲಸ ನಿರ್ವಹಿಸುವಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರಿಗೆ ಸಹಾಯಕರಾಗಿರುತ್ತಾರೆ.
5. ಮೇಲಾಧಿಕಾರಿಗಳಿಗೆ ನಿಗದಿತ ದಿನಾಂಕದೊಳಗೆ ಎಲ್ಲಾ ಮಾಹಿತಿಗಳನ್ನು ಸಲ್ಲಿಸುವುದು.
6. ಕಾಮಗಾರಿಗಳ ಅಂದಾಜು ಪತ್ರಿಕೆ, ಕಾಮಗಾರಿಯ ಲೈನ್‌ಔಟ್ ಕುರಿತು ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು ಕ್ರಮ ತೆಗೆದುಕೊಳ್ಳಬೇಕು.
7. ಕಾಮಗಾರಿ ನಗದು ಪುಸ್ತಕ, ಸಾಮಾನ್ಯ ನಗದು ಪುಸ್ತಕ, ಉಗ್ರಾಣ ಲೆಕ್ಕ ಪತ್ರ, ಎಂ.ಎ.ಎಸ್., ಆರ್.ಎಂ.ಆರ್, ವಾಹನಗಳ ಲಾಗ್‌ಬುಕ್, ದಿನಚರಿಗಳ ನಿರ್ವಹಣೆಗೆ ಕ್ರಮ ಕೈಗೊಳ್ಳುವುದು.
8. ಮೇಲಾಧಿಕಾರಿಗಳ ಸಭೆಗೆ ಹಾಜರಾಗುವುದು.

ಕೈಪಿಡಿ :- 3) ನಿರ್ಣಯ ತೆಗೆದುಕೊಳ್ಳುವಲ್ಲಿ ಪಾಲಿಸಬೇಕಾದ ವಿಧಿ ವಿಧಾನಗಳು ಮತ್ತು ಪರಿವೀಕ್ಷಣೆ ಮತ್ತು ಜವಾಬ್ದಾರಿ ವಿವರಗಳು

ಇಲಾಖೆಯು ಕಾಮಗಾರಿಗೆ ಸಂಬಂಧಪಟ್ಟ ನಿರ್ಣಯ ತೆಗೆದುಕೊಳ್ಳುವಲ್ಲಿ, ಈ ಕೆಳಗೆ ನಮೂದಿಸಿದ ಕಾಯ್ದೆ ಕಾನೂನುಗಳನ್ನು ಅನುಸರಿಸಲಾಗುವುದು.

- ಲೋಕೋಪಯೋಗಿ ಇಲಾಖೆಯ ಸಂಹಿತೆ ಭಾಗ-1 ಮತ್ತು ಭಾಗ-2
- ಕರ್ನಾಟಕ ಪಾರದರ್ಶಕ ನಿಯಮ
- ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ-1 ಮತ್ತು ಭಾಗ-2
- ಭೂ ಸ್ವಾಧೀನ ಕಾಯ್ದೆ.
- ಉಗ್ರಾಣ ಕೈಪಿಡಿ
- ಮಧ್ಯಸ್ಥಿಕೆ ಕಾಯ್ದೆ

- ಕರ್ನಾಟಕ ಲಿಟಿಗೇಶನ್ ಕಾಯ್ದೆ

ಆಡಳಿತವನ್ನು ನಿರ್ವಹಿಸಲು

- ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು
- ಕರ್ನಾಟಕ ಆರ್ಥಿಕ ಸಂಹಿತೆ
- ಕರ್ನಾಟಕ ಖಜಾನೆ ಸಂಹಿತೆ
- ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು.
- ಕರ್ನಾಟಕ ನಾಗರಿಕ ಸೇವಾ (ಸಿ.ಸಿ.ಎ.) ನಿಯಮಗಳು
- ಕರ್ನಾಟಕ ನಾಗರೀಕ ಸೇವಾ (ಪ್ರೊಬೇಶನರಿ) ನಿಯಮಗಳು

ಈ ಇಲಾಖೆಯಲ್ಲಿ ನಿರ್ವಹಿಸಲ್ಪಡುವ ಎಲ್ಲಾ ಕಾಮಗಾರಿಗಳನ್ನು ಕರ್ನಾಟಕ ಪಾರದರ್ಶಕ ನಿಯಮದ ಅನುಸಾರ ಟೆಂಡರ್ ಕರೆದು ಗುತ್ತಿಗೆದಾರರಿಗೆ ಕೊಡಲಾಗುತ್ತದೆ. ಗುತ್ತಿಗೆದಾರರನ್ನು ನಿಗದಿಪಡಿಸಿದ ನಂತರ ಅವರಿಗೆ ಕಾರ್ಯಾದೇಶ ನೀಡಲಾಗುತ್ತದೆ. ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು, ಗುತ್ತಿಗೆದಾರರಿಗೆ ಕೆಲಸದ ಸ್ಥಳವನ್ನು ಹಸ್ತಾಂತರಿಸಿ ಕೆಲಸವನ್ನು ಅನುಷ್ಠಾನಗೊಳಿಸಲು ಲೈನ್‌ಔಟ್ ನೀಡಿ ಕೆಲಸ ಪ್ರಾರಂಭ ಮಾಡಲು ಕ್ರಮ ಕೈಗೊಳ್ಳುತ್ತಾರೆ. ಸಂಬಂಧಿಸಿದ ಸಹಾಯಕ/ಕಿರಿಯ ಇಂಜಿನೀಯರರು, ಪ್ರತಿ ನಿತ್ಯ ಕೆಲಸದ ಸ್ಥಳಕ್ಕೆ ಹೋಗಿ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾರೆ. ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರು ಕೆಲಸದ ಸ್ಥಳಕ್ಕೆ ಮೇಲಿಂದ ಮೇಲೆ ಭೇಟಿ ನೀಡಿ ಕೆಲಸವನ್ನು ಪರಿವೀಕ್ಷಿಸುತ್ತಾರೆ. ಹಾಗೆಯೇ, ಕಾರ್ಯನಿರ್ವಾಹಕ ಇಂಜಿನೀಯರರು, ಅಧೀಕ್ಷಕ ಇಂಜಿನೀಯರರು ಹಾಗೂ ಮುಖ್ಯ ಇಂಜಿನೀಯರರು ಕಾಮಗಾರಿ ಸ್ಥಳಕ್ಕೆ ಭೇಟಿ ನೀಡಿ ಸಲಹೆ ಸೂಚನೆಗಳನ್ನು ನೀಡುತ್ತಾರೆ. ಕಾಮಗಾರಿ ಪ್ರಗತಿಯನ್ನು ಪರಿಶೀಲಿಸಲು ಕಾರ್ಯನಿರ್ವಾಹಕ ಇಂಜಿನೀಯರರು, ಅಧೀಕ್ಷಕ ಇಂಜಿನೀಯರರು ಹಾಗೂ ಮುಖ್ಯ ಇಂಜಿನೀಯರರ ಮಟ್ಟದಲ್ಲಿ ಸಭೆ ನಡೆಸಲಾಗುತ್ತದೆ.

ಅಕೌಂಟೆಬಿಲಿಟಿ ಬಗ್ಗೆ ಮಹಾಲೇಖಪಾಲಕರು, 2 ವರ್ಷಕ್ಕೊಮ್ಮೆ ಸಂಬಂಧಿತ ಉಪವಿಭಾಗ ಕಛೇರಿಗಳ ಪರಿವೀಕ್ಷಣೆ ಮಾಡುತ್ತಾರೆ. ಅಲ್ಲದೆ ಮುಖ್ಯ ಇಂಜಿನೀಯರ್‌ರವರ ಕಛೇರಿ, ಅಧೀಕ್ಷಕ ಇಂಜಿನೀಯರರ ಕಛೇರಿ, ಕಾರ್ಯನಿರ್ವಾಹಕ ಇಂಜಿನೀಯರರ ಕಛೇರಿಯಿಂದಲೂ ಉಪವಿಭಾಗಗಳ ತಪಾಸಣೆ ನಡೆಯುತ್ತದೆ. ಕಳಪೆ ಕಾಮಗಾರಿಯ ಬಗ್ಗೆ ಏನಾದರೂ ಅರ್ಜಿ ಬಂದಲ್ಲಿ ಮಾನ್ಯ ಲೋಕಾಯುಕ್ತರು ಕೂಡ ಕಾಮಗಾರಿಯನ್ನು ಪರಿವೀಕ್ಷಣೆ ಮಾಡಿ ಏನಾದರೂ ಕಳಪೆ ಕಾಮಗಾರಿ ಇದ್ದಲ್ಲಿ ಸೂಕ್ತ ಕ್ರಮಕ್ಕೆ ಶಿಫಾರಸ್ಸು ಮಾಡುತ್ತಾರೆ.

ಕೈಪಿಡಿ :– 4) ಕರ್ತವ್ಯಗಳ ನಿರ್ವಹಣೆಯಲ್ಲಿ ಪಾಲಿಸಬೇಕಾದ ಸೂತ್ರಗಳು

ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಯ ಅಧಿಕಾರಿಗಳ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ.
ಸರ್ಕಾರಿ ಆದೇಶ ಸಂಖ್ಯೆ : ಪಿಡಬ್ಲ್ಯೂ–1 ಎಫ್.ಸಿ.ಆರ್–93 ಬೆಂಗಳೂರು ದಿನಾಂಕ : 15–12–1994
ಸಾಮಾನ್ಯ ಆರ್ಥಿಕ ಅಧಿಕಾರ ಪ್ರತ್ಯಾಯೋಜನೆ
ಸರ್ಕಾರಿ ಆದೇಶ ಸಂಖ್ಯೆ : ಎಫ್.ಡಿ–1 ಟಿಎಫ್‌ಪಿ–2001, ಬೆಂಗಳೂರು ದಿನಾಂಕ : 02–02–2001
ಲೋಕೋಪಯೋಗಿ ಇಲಾಖೆ ಸಂಹಿತೆ
ಲೋಕೋಪಯೋಗಿ ಲೆಕ್ಕ ಸಂಹಿತೆ

ಕೈಪಿಡಿ :– 5) ಇಲಾಖೆಯ ಅಧೀನದಲ್ಲಿರುವ ಮತ್ತು ಸಿಬ್ಬಂದಿ ಉಪಯೋಗಿಸುತ್ತಿರುವ ನಿಯಮಗಳು, ವಿನಿಯಮಗಳು, ಸೂಚನೆಗಳು, ದಾಖಲೆಗಳು, ಕೈಪಿಡಿಗಳ ವಿವರ.

ಕಛೇರಿ ಕೈಪಿಡಿ ನಿಯಮಗಳು, ವಿನಿಯಮಗಳು ಮತ್ತು ಸೂಚನೆಗಳು
ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು
ಕರ್ನಾಟಕ ಆರ್ಥಿಕ ಸಂಹಿತೆ
ಕರ್ನಾಟಕ ಖಜಾನೆ ಸಂಹಿತೆ
ಕರ್ನಾಟಕ ನಾಗರಿಕ ಸೇವಾ (ಸಿ.ಸಿ.ಎ.) ನಿಯಮಗಳು
ಲೋಕೋಪಯೋಗಿ ಇಲಾಖೆ ಸಂಹಿತೆ ಭಾಗ–1 ಮತ್ತು ಭಾಗ–2
ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧ್ಯಾದೇಶ–2000
ಲೋಕೋಪಯೋಗಿ ಲೆಕ್ಕ ಸಂಹಿತೆ ಭಾಗ–1 ಮತ್ತು ಭಾಗ–2
ಭೂ ಸ್ವಾಧೀನ ಕಾಯ್ದೆ
ಉಗ್ರಾಣ ಕೈಪಿಡಿ
ಕರ್ನಾಟಕ ನೀರಾವರಿ ಕಾಯ್ದೆ
ಆಯ್. ಎಸ್. ಕೋಡ್ಸ್
ಸಾದಿಲ್ವಾರು ವೆಚ್ಚದ ಕೈಪಿಡಿ
ಚಾಲ್ತಿ ದರ ಪಟ್ಟಿ
ಬಜೆಟ್ ಕೈಪಿಡಿ

ಹೆದ್ದಾರಿ ಕಾಯ್ದೆ – 1964 ನಿಯಮಗಳು

ಕೈಪಿಡಿ :– 6) ಇಲಾಖೆಯ ಅಧೀನದಲ್ಲಿರುವ ವರ್ಗೀಕರಣದ ತಃಖ್ತೆ

ತಾಂತ್ರಿಕ ಶಾಖೆ :

1. ಕಾರ್ಯನಿರ್ವಾಹಕ ಇಂಜಿನೀಯರವರ, ಅಧೀಕ್ಷಕ ಇಂಜಿನೀಯರರ ಮತ್ತು ಮುಖ್ಯ ಇಂಜಿನೀಯರ್‌ರವರ ಮಟ್ಟದಲ್ಲಿ ಮಂಜೂರಾದ ಅಂದಾಜು ಪತ್ರಿಕೆಗಳು ಅದಕ್ಕೆ ಸಂಬಂಧಪಟ್ಟ ಕಡತಗಳು.
2. ಪ್ರಗತಿಯ ವರದಿಗಳು.
3. ಆಯವ್ಯಯಕ್ಕೆ ಸಂಬಂಧಪಟ್ಟ ಆಯವ್ಯಯ ಪ್ರಸ್ತಾವನೆ ಮತ್ತು ಆಯವ್ಯಯ ಪಟ್ಟಿ.
4. ಭಾರಿ ಹಾಗೂ ಸಣ್ಣ ಅಂದಾಜುಗಳ ಮಂಜೂರಾತಿ ವಹಿ.
5. ಪಿ.ಡಬ್ಲ್ಯೂ.ಡಿ. ವಶದಲ್ಲಿರುವ ಸೇತುವೆ ಮತ್ತು ಕಲ್ವರ್ಟ್‌ಗಳ ವಹಿ.
6. ದರಸೂಚಿ
7. ಆಯವ್ಯಯ ಕಾಮಗಾರಿಗಳ ವಹಿ
8. ಮೇಲಾಧಿಕಾರಿಗಳಿಂದ ಮಂಜೂರಾದ ಅಂದಾಜು ಪಟ್ಟಿ
9. ಹೆಚ್ಚುವರಿ ಐಟಂ ದರ ಪಟ್ಟಿಯ ವಹಿ
10. ತುಂಡುಗುತ್ತಿಗೆ ಕರಾರು ಪತ್ರ ವಹಿ
11. ಸೇತುವೆಗಳ ವಹಿ
12. ಕಟ್ಟಡಗಳ ವಹಿ

**ದಾಖಲೆಗಳು : ಆಡಳಿತ ಶಾಖೆ ಉಪವಿಭಾಗ ಕಛೇರಿಯ ತಪಾಸಣೆಗೆ ಅಗತ್ಯವಿರುವ ವಹಿಗಳು ಮತ್ತು ದಾಖಲಾತಿಗಳ ಪಟ್ಟಿ**

1. ಹಾಜರಾತಿ ವಹಿ
2. ಪತ್ರಾಂಕಿತವಲ್ಲದ ಅಧಿಕಾರಿಗಳ ಸಾಂದರ್ಭಿಕ ರಜೆ ವಹಿ
3. ಸಂಘಟನಾ ಫಲಕ
4. ಮಂಜೂರಾತಿ ಹಾಗೂ ಖಾಲಿ ಹುದ್ದೆಗಳ ತಃಖ್ತೆ
5. ಕೆಲಸ ವಿತರಣೆಯ ತಃಖ್ತೆ
6. ವೇತನ ಬಡ್ತಿ ಮಂಜೂರಾತಿಯ ವಹಿ.
7. ಇನ್‌ಕಂಬನ್ಸಿ ವಹಿ
8. ರಹಸ್ಯ ವರದಿಗಳ ವಹಿ
9. ಆಸ್ತಿ ಹಾಗೂ ಹೊಣೆಗಾರಿಕೆ ಪಟ್ಟಿಗಳ ವಹಿ
10. ನಿವೃತ್ತಿ ವೇತನ ಪ್ರಕರಣಗಳ ಕುರಿತು ನಿಗಾ ವಹಿ
11. ಸೇವಾ ಪುಸ್ತಕಗಳ ನಿಗಾ ವಹಿ
12. ಇಲಾಖಾ ಪರೀಕ್ಷೆಗಳ ನಿಗಾ ವಹಿ
13. ಪರಿವೀಕ್ಷಣಾ ಟಿಪ್ಪಣಿ ಪುಸ್ತಕ
14. ವಿಧಾನ ಸಭೆ, ವಿಧಾನ ಪರಿಷತ್ ಪ್ರಶ್ನೆಗಳ ವಹಿ
15. ಸ್ಟ್ಯಾಂಪು ವಹಿ
16. ಸಾಮಾನ್ಯ ಸ್ವೀಕೃತಿ ವಹಿ
17. ರವಾನೆ ವಹಿ
18. ಕಛೇರಿಯ ಆದೇಶ ಪುಸ್ತಕ
19. ಸಾಮಾನ್ಯ ನಗದು ಪುಸ್ತಕ
20. ವೇತನ ಬಟವಾಡೆ ವಹಿ
21. ಪ್ರಯಾಣ ಭತ್ಯೆ ಬಟವಾಡೆ ವಹಿ
22. ಸಾದಿಲ್ವಾರು ವೆಚ್ಚ ವಹಿ

**ಲೆಕ್ಕ ಶಾಖೆ:**

1. ನಗದು ಪುಸ್ತಕ
2. ಚೆಕ್ ಮೆಮೋ ಪುಸ್ತಕ
3. ರೆಮಿಟನ್ಸ್ ರಿಜಿಸ್ಟರ್
4. ಎಸ್.ಬಿ.ಆರ್.

5. ಚೆಕ್ ಹಾಗೂ ಸ್ವೀಕೃತಿ ರಿಜಿಸ್ಟರ್

**ಉಗ್ರಾಣ ಶಾಖೆ :**

1. ದಾಸ್ತಾನು ಸ್ವೀಕೃತಿ ವಹಿ
2. ದಾಸ್ತಾನು ವಿತರಣಾ ವಹಿ
3. ಅರ್ಧವಾರ್ಷಿಕ ನಿಯತಕಾಲಿಕ ವಹಿ
4. ಖಾಲಿ ಸಾಮಗ್ರಿಗಳ ವಹಿ
5. ಖಾಲಿ ಅಳತೆ ಪುಸ್ತಕಗಳ ವಹಿ
6. ಕಛೇರಿ ಪೀಠೋಕರಣಗಳ ವಹಿ
7. ಲೇಖನ ಸಾಮಗ್ರಿಗಳ ವಹಿ
8. ಯಂತ್ರೋಪಕರಣಗಳ ವಹಿ
9. ಅಳತೆ ಪುಸ್ತಕಗಳ ಅರ್ಧವಾರ್ಷಿಕ ನಿಯತಕಾಲಿಕ

ಕೈಪಿಡಿ :– 7) ಇಲಾಖೆಯಲ್ಲಿ ನೀತಿ ನಿಯಮಗಳನ್ನು ಅಥವಾ ಆಡಳಿತವನ್ನು ನಡೆಸುವಲ್ಲಿ ಪಡೆಯುವ ಸಲಹಾ ಸೂತ್ರಗಳ ಅಥವಾ ಸಾರ್ವಜನಿಕ ಸದಸ್ಯರುಗಳಿಂದ ಸಲಹೆ ಪಡೆಯುವ ಬಗ್ಗೆ ಇರುವ ವ್ಯವಸ್ಥೆ ಮತ್ತು ವಿವರ.

ಏನೂ ಇರುವುದಿಲ್ಲ.

ಕೈಪಿಡಿ :– 8) ಇಲಾಖೆಯಲಿ ನಿಗಮ/ಪರಿಷತ್ತು/ಸಮಿತಿ ಮತ್ತು ಇತರ ಸಂಸ್ಥೆಗಳ ವಿವರ ಮತ್ತು ಅದರ ಉದ್ದೇಶ ಮತ್ತು ಈ ಸಂಸ್ಥೆಗಳ ಸಭೆಗಳು ಮತ್ತು ಸಭೆಯ ನಡುವಳಿಗಳು ಸಾರ್ವಜನಿಕರಿಗೆ ಲಭ್ಯವಿರುವ ಬಗ್ಗೆ.

ಏನೂ ಇರುವುದಿಲ್ಲ.

ಕೈಪಿಡಿ :– 9) ಇಲಾಖೆಯ ಅಧಿಕಾರ ಮತ್ತು ಸಿಬ್ಬಂದಿ ವರ್ಗದ ನಿರ್ದೇಶಿಕೆ.

ಈ ಇಲಾಖೆಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಇವರ ಅಧಿಕಾರದ ಬಗ್ಗೆ ಕೈಪಿಡಿ 2 ರಲ್ಲಿ ಈಗಾಗಲೇ ನಮೂದಿಸಲಾಗಿದೆ.

**ಸಿಬ್ಬಂದಿ ವರ್ಗದ ನಿರ್ದೇಶಿಕೆ (ಸಂಘಟನಾ ನಕ್ಷೆ) ಈ ಕೆಳಗಿನಂತಿದೆ.**

| ಕ್ರ. ಸಂ. | ಹುದ್ದೆ | ಹೆಸರು |
|---|---|---|
| 1. | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ – 1 | ಶ್ರೀ ವ್ಹಿ.ಕೆ. ಟಿಕಾರೆ |
| 2. | ಸಹಾಯಕ ಇಂಜಿನೀಯರ್ – 2 | 1) ಖಾಲಿ<br>2) ಖಾಲಿ |
| 3. | ಕಿರಿಯ ಇಂಜಿನೀಯರ್ – 3 | 1) ಶ್ರೀ ವ್ಹಿ.ಎಸ್. ಪವಾರ<br>2) ಶ್ರೀ ಎಂ.ಜಿ. ಕಮ್ಮಾರ<br>3) ಶ್ರೀ ನಾಗರಾಜ<br>4) ಶ್ರೀ ಮನೋಹರ ಹಾದಿಮನಿ<br>5) ಖಾಲಿ |
| 4. | ಪ್ರಥಮ ದರ್ಜೆ ಸಹಾಯಕರು – 1 | 1) ಶ್ರೀ ಎಸ್.ಎಂ. ಹಂಚಿನಾಳ |
| 5. | ದ್ವಿತೀಯ ದರ್ಜೆ ಸಹಾಯಕರು – 2 | 1) ಶ್ರೀ ಎಂ.ಬಿ. ನಿರಂಜನಸ್ವಾಮಿ<br>2) ಶ್ರೀ ಪಿ.ಎಸ್. ಹೊಸಮಠ |
| 6. | ಕೆಲಸ ತಪಾಸಿಗರು – 5 | 1) ಶ್ರೀ ಬಿ.ಆರ್. ಉಜ್ಜಪ್ಪಳವರ<br>2) ಶ್ರೀ ಜಿ.ಎಂ. ಮಡಿವಾಳರ<br>3) ಶ್ರೀ ಎಸ್.ಎನ್. ಮಾಳಾಪೂರ<br>4) ಶ್ರೀ ಬಿ.ಐ. ಚಪ್ಪರದಹಳ್ಳಿ<br>5) ಶ್ರೀ ವ್ಹಿ.ಪಿ. ಮಾಳದಕರ |
| 7. | ವಾಹನ ಚಾಲಕರು – 3 | 1) ಶ್ರೀ ಎಂ.ಆರ್. ನದಾಫ್<br>2) ಶ್ರೀ ಹೆಚ್.ಪಿ. ಭಜಂತ್ರಿ<br>3) ಖಾಲಿ |
| 8. | ಜವಾನರು – 2 | 1) ಶ್ರೀ ಜಿ. ವ್ಹಾಯ್. ಉಪ್ಪಾರ<br>2) ಖಾಲಿ |
| 9. | ಚೌಕೀದಾರರು – 3 | 1) ಶ್ರೀ ಎಸ್.ಪಿ. ಮೂಲಿಮನಿ<br>2) ಶ್ರೀ ಎಸ್.ಬಿ. ಮುತಗಿ<br>3) ಖಾಲಿ |

| | | |
|---|---|---|
| 10. | ಖಲಾಸಿ – 4 | 1) ಖಾಲಿ<br>2) ಖಾಲಿ<br>3) ಖಾಲಿ<br>4) ಖಾಲಿ |
| | **ಸೂಪರ್‌ನ್ಯೂಮರರಿ ಹುದ್ದೆಗಳು** | |
| 1. | ಅಕ್ಷರಸ್ಥ ಸಹಾಯಕ | 1) ಶ್ರೀ ಆರ್.ಡಿ. ಶೀತಿಕೊಂಡ<br>2) ಶ್ರೀ ಎಂ.ಎಂ. ದ್ಯಾವಣ್ಣನವರ |

ಕೈಪಿಡಿ :– 10) ಇಲಾಖೆಯ ಅಧಿಕಾರ ಮತ್ತು ಸಿಬ್ಬಂದಿ ವರ್ಗದವರ ತಿಂಗಳ/ಪ್ರತಿಫಲ ಮತ್ತು ಅದನ್ನು ನೀಡುವ ಸೂತ್ರಗಳು

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರ ಕಛೇರಿಯಲ್ಲಿರುವ ಅಧಿಕಾರಿ ಮತ್ತು ಸಿಬ್ಬಂದಿಗಳ ವೇತನವನ್ನು ಕರ್ನಾಟಕ ಸರ್ಕಾರದ ಸಂಚಿತ ನಿಧಿಯಿಂದ ಪಾವತಿಸಲಾಗುತ್ತಿದೆ.

| ಕ್ರ. ಸಂ. | ಹುದ್ದೆ | ಹೆಸರು | ವೇತನ ಶ್ರೇಣಿ | ಮೂಲ ವೇತನ |
|---|---|---|---|---|
| 1. | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ – 1 | ಶ್ರೀ ವ್ಹಿ.ಕೆ. ಟಿಕಾರೆ | 14050–25050 | 25050.00<br>ಪಿಪಿ 600.00 |
| 2. | ಸಹಾಯಕ ಇಂಜಿನೀಯರ್ – 2 | 1) ಖಾಲಿ<br>2) ಖಾಲಿ | 11400–21600<br>11400–21600 | –<br>– |
| 3. | ಕಿರಿಯ ಇಂಜಿನೀಯರ್ – 5 | 1) ಶ್ರೀ ವ್ಹಿ.ಎಸ್.ಪವಾರ<br>2) ಶ್ರೀ ಎಂ.ಜಿ. ಕಮ್ಮಾರ<br>3) ಶ್ರೀ ನಾಗರಾಜ<br>4) ಶ್ರೀ ಮನೋಹರ. ಹಾದಿಮನಿ<br>5) ಖಾಲಿ | 8825–16000 | 15600.00<br>11700.00<br>9500.00<br>8825.00 |
| 4. | ಪ್ರಥಮ ದರ್ಜೆ ಸಹಾಯಕರು – 1 | 1) ಶ್ರೀ ಎಸ್.ಎಂ. ಹಂಚಿನಾಳ | 7275–13350 | 7275.00 |
| 5. | ದ್ವಿತಿಯ ದರ್ಜೆ ಸಹಾಯಕರು – 2 | 1) ಶ್ರೀ ಎಂ.ಬಿ. ನಿರಂಜನಸ್ವಾಮಿ<br>2) ಶ್ರೀ ಪಿ.ಎಸ್. ಹೊಸಮಠ | 5800–10500<br>5800–10500 | 8000.00<br>7450.00 |
| 6. | ಕೆಲಸ ತಪಾಸಿಗರು – 5 | 1) ಶ್ರೀ ಬಿ.ಆರ್. ಉಜ್ಜಪ್ಪಳವರ<br>2) ಶ್ರೀ ಜಿ.ಎಂ. ಮಡಿವಾಳರ<br>3) ಶ್ರೀ ಎಸ್.ಎನ್. ಮಾಳಾಪೂರ<br>4) ಶ್ರೀ ಬಿ.ಐ. ಚಪ್ಪರದಹಳ್ಳಿ<br>5) ಶ್ರೀ ವ್ಹಿ.ಪಿ. ಮಾಳದಕರ | 5800–10500<br>5800–10500<br>5800–10500<br>5800–10500<br>5800–10500 | 10500.00<br>8825.00<br>8825.00<br>8825.00<br>8825.00 |
| 7. | ವಾಹನ ಚಾಲಕರು – 3 | 1) ಶ್ರೀ ಎಂ.ಆರ್. ನದಾಫ್<br>2) ಶ್ರೀ ಹೆಚ್.ಪಿ. ಭಜಂತ್ರಿ<br>3) ಖಾಲಿ | 5800–10500<br>5800–10500<br>– | 8825.00<br>6250.00<br>– |
| 8. | ಜವಾನರು – 2 | 1) ಶ್ರೀ ಜಿ.ವ್ಹಾಯ್. ಉಪ್ಪಾರ<br>2) ಖಾಲಿ | 4800–7275<br>4800–7275 | 5900.00<br>– |
| 9. | ಚೌಕೀದಾರರು – 3 | 1) ಶ್ರೀ ಎಸ್.ಪಿ. ಮೂಲಿಮನಿ<br>2) ಶ್ರೀ ಎಸ್.ಬಿ. ಮುತಗಿ<br>3) ಖಾಲಿ | 4800–7275<br>4800–7275<br>4800–7275 | 5800.00<br>5900.00<br>– |
| 10. | ಖಲಾಸಿ – 4 | 1) ಖಾಲಿ<br>2) ಖಾಲಿ<br>3) ಖಾಲಿ<br>4) ಖಾಲಿ | 4800–7275<br>4800–7275<br>4800–7275<br>4800–7275 | –<br>–<br>–<br>– |
| | | **ಸೂಪರ್‌ನ್ಯೂಮರರಿ ಹುದ್ದೆಗಳು** | | |
| 1 | ಅಕ್ಷರಸ್ಥ ಸಹಾಯಕ | 1) ಶ್ರೀ ಆರ್.ಡಿ. ಶೀತಿಕೊಂಡ<br>2) ಶ್ರೀ ಎಂ.ಎಂ. ದ್ಯಾವಣ್ಣನವರ | 5800–10500<br>5800–10500 | 8600.00<br>7450.00 |

ಕೈಪಿಡಿ :– 11)

ಇಲಾಖೆಯಲ್ಲಿ ಸಹಾಯಧನ ನೀಡುವ ಕಾರ್ಯಕ್ರಮಗಳ ನಿರ್ವಹಣಾ ವಿವರ ಮತ್ತು ಅದಕ್ಕೆ ಒದಗಿಸಲಾದ ಅನುದಾನ ಮತ್ತು ಫಲಾನುಭವಿಗಳ ವಿವರಗಳು.

ಸಹಾಯಧನ ನೀಡುವ ಕಾರ್ಯಕ್ರಮಗಳು ಇಲ್ಲ.

ಕೈಪಿಡಿ :– 12)

ಇಲಾಖೆಯಲ್ಲಿ ನೀಡುತ್ತಿರುವ ಪರ್ಮಿಟ್ ಅಥವಾ ಅಧಿಕಾರ ಪತ್ರಗಳ ವಿವರ ಮತ್ತು ರಿಯಾಯಿತಿ ಪಡೆಯುವವರ ವಿವರ

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್ ರಾಜ್, ಇಂಜಿನೀಯರಿಂಗ್, ಹಿರೇಕೆರೂರು ಉಪವಿಭಾಗದ ವ್ಯಾಪ್ತಿಯಲ್ಲಿ ಯಾವುದೇ ಪರ್ಮಿಟ್ ಅಥವಾ ಅಧಿಕಾರ ಪತ್ರಗಳನ್ನು ನೀಡುತ್ತಿಲ್ಲ.

ಕೈಪಿಡಿ :– 13)

ಇಲಾಖೆಯಲ್ಲಿ ಮಾಹಿತಿಯನ್ನು ವೆಬ್‌ಸೈಟ್‌ನಲ್ಲಿ ನೀಡಿರುವ ಬಗ್ಗೆ ವಿವರ

ಇಲಾಖೆಯಲ್ಲಿ ವೆಬ್‌ಸೈಟ್ ಯಾವುದೂ ಇಲ್ಲ.

ಕೈಪಿಡಿ :– 14)

ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ಪಡೆಯಲು ಲಭ್ಯವಿರುವ ಸವಲತ್ತುಗಳು ಹಾಗೂ ಗ್ರಂಥಾಲಯ ಅಥವಾ ವಾಚನಾಲಯಗಳು ಇದ್ದಲ್ಲಿ ಅದರ ವಿವರ

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್ ರಾಜ್, ಇಂಜಿನೀಯರಿಂಗ್, ಹಿರೇಕೆರೂರು, ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಶ್ರೀ ವ್ಹಿ.ಕೆ. ಟಿಕಾರೆ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಇವರಿಗೆ ಅರ್ಜಿ ನೀಡುವುದು ಅಥವಾ ಸಂಪರ್ಕಿಸುವುದು.

ಕಛೇರಿಯ ಸಮಯದ ವೇಳೆಯಲ್ಲಿ ಮೇಲ್ಕಂಡ ಅಧಿಕಾರಿಗಳ ದೂರವಾಣಿ ಸಂಖ್ಯೆ : 08376–282229

ಸಾರ್ವಜನಿಕರಿಗೆ ಬಳಕೆಗೆ ವಾಚನಾಲಯ ಲಭ್ಯವಿರುವುದಿಲ್ಲ.

ಕೈಪಿಡಿ :– 15)

ಇಲಾಖೆಯಲ್ಲಿ ಸಾರ್ವಜನಿಕರಿಗೆ ಮಾಹಿತಿ ಅಧಿಕಾರಿಗಳ ಹೆಸರು, ಪದನಾಮ ಮತ್ತು ವಿವರಗಳು, ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು ಪದನಾಮ

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ಪಂಚಾಯತ್ ರಾಜ್, ಇಂಜಿನೀಯರಿಂಗ್, ಹಿರೇಕೆರೂರು, ಇವರ ವ್ಯಾಪ್ತಿಯಲ್ಲಿ ಲಭ್ಯವಿರುವ ಸವಲತ್ತುಗಳನ್ನು ಪಡೆಯಲು ಸವಲತ್ತುಗಳನ್ನು ಪಡೆಯಲು ಶ್ರೀ ವ್ಹಿ.ಕೆ. ಟಿಕಾರೆ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್ ಇವರಿಗೆ ಅರ್ಜಿ ನೀಡುವುದು ಅಥವಾ ಕಛೇರಿ ವೇಳೆಯಲ್ಲಿ ಸಂಪರ್ಕಿಸುವುದು.

ಕೈಪಿಡಿ :– 16)

ಇತರೆ ವಿವರಗಳು

ಏನೂ ಇರುವುದಿಲ್ಲ.

ಮಾಹಿತಿಯನ್ನು ನಿಯಮದಡಿ ಪರಿಶೀಲಿಸಿ ವರದಿಯನ್ನು ತಯಾರಿಸಿ ಸಲ್ಲಿಸಲಾಗಿದೆ.

**ವ್ಹಿ.ಕೆ. ಟಿಕಾರೆ**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್

ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪವಿಭಾಗ, ಹಿರೇಕೆರೂರು

**ತಾಲೂಕು : ಹಿರೇಕೆರೂರ**

| ಕ್ರ. ಸಂ. | ಲೆಕ್ಕ ಶೀರ್ಷಿಕೆ | ಬಿಡುಗಡೆ ಮಾಡಿದ ಅನುದಾನ |
|---|---|---|
| **1** | **2** | **3** |
| 1 | 2007–08ನೇ ಸಾಲಿನ ಗ್ರಾಮೀಣ ನೀರು ಸರಬರಾಜು ಯೋಜನೆಯಡಿ ಕಾಮಗಾರಿಗಳ ಕ್ರಿಯಾ ಯೋಜನೆ (ರೂ.89.00) 4215–01–102–9–01 State | 14.790 |
| 2 | 2007–08ನೇ ಸಾಲಿನ ಗ್ರಾಮೀಣ ನೀರು ಸರಬರಾಜು ಯೋಜನೆಯಡಿ ಕಾಮಗಾರಿಗಳ ಕ್ರಿಯಾ ಯೋಜನೆ (ರೂ.51.00) (ರಾಜ್ಯ ವಲಯ) | 7.880 |
| | 2007–08ನೇ ಸಾಲಿನ ಗ್ರಾಮೀಣ ನೀರು ಸರಬರಾಜು ಯೋಜನೆಗಳ ಅನುಬಂಧ ಇ ಭಾಗ–1 NRWS (ರೂ.296.83 ಲಕ್ಷಗಳು) | – |

| | | |
|---|---|---|
| 3 | 4215–01–102–9–01–132 (NRWS) ರಾಜ್ಯ ವಲಯ Slipped Back Habitations ನಲ್ಲಿ ನೀರು ಸರಬರಾಜು ಯೋಜನೆ ಪುನಶ್ಚೇತನ | 5.000 |
| 4 | 4215–01–102–9–01–132 (NRWS) ರಾಜ್ಯ ವಲಯ Slipped Back Habitations ನಲ್ಲಿ ನೀರು ಸರಬರಾಜು ಯೋಜನೆ ಪುನಶ್ಚೇತನ | 15.300 |
| 5 | 4215–01–102–9–01–132 (NRWS) ರಾಜ್ಯ ವಲಯ Slipped Back Habitations ಕಿರು ನೀರು ಸರಬರಾಜು ಯೋಜನೆ ಪುನಶ್ಚೇತನ | 4.750 |
| 6 | 4215–01–102–9–01–132 (NRWS) ರಾಜ್ಯ ವಲಯ Slipped Back Habitations ನಲ್ಲಿ ಕಿರು ನೀರು ಸರಬರಾಜು ಯೋಜನೆ ಪುನಶ್ಚೇತನ | 5.000 |
| 7 | 4215–01–102–9–01–132 (NRWS) ರಾಜ್ಯ ವಲಯ Slipped Back Habitations ನಲ್ಲಿ ಕಿರು ನೀರು ಸರಬರಾಜು ಯೋಜನೆ ಅಭಿವೃದ್ಧಿ | 20.000 |
| | 2007–08ನೇ ಸಾಲಿನ ಗ್ರಾಮೀಣ ನೀರು ಸರಬರಾಜು ಯೋಜನೆಗಳು ಅನುಬಂಧ ಇ ARWSP (ರೂ.559.05 ಲಕ್ಷಗಳು) | – |
| 8 | 44215–01–102–9–04–132 (ARWSP) ಕೇಂದ್ರ ವಲಯ CAP-99 Habitationsನಲ್ಲಿ ನೀರು ಸರಬರಾಜು ಯೋಜನೆ ಅಭಿವೃದ್ಧಿ | 9.500 |
| 9 | 2007–08ನೇ ಸಾಲಿನಲ್ಲಿ ರಾಜ್ಯವಲಯದ ಎಂ.ಎನ್.ಪಿ. ಅಡಿ ಕುಡಿಯುವ ನೀರಿನ ಯೋಜನೆಗಳ ನಿರಂತರತೆಗಾಗಿ ಅಂತರ್ಜಲ ಮರು ಪೂರಣ ಕಾಮಗಾರಿಗಳ ಕ್ರಿಯಾ ಯೋಜನೆ ರೂ. 28.00 ಲಕ್ಷಗಳು. | 4.000 |
| 10 | 2007–08ನೇ ಸಾಲಿನ ನೀರು ಸರಬರಾಜು ಯೋಜನೆ ಕಾಮಗಾರಿಗಳ ಕ್ರಿಯಾ ಯೋಜನೆ (ರಾಜ್ಯ ವಲಯ) MNP (ರೂ. 171.002 ಲಕ್ಷಗಳು) | 51.010 |
| 11 | 2007–08ನೇ ಸಾಲಿನ ಮುಖ್ಯ ಮಂತ್ರಿಗಳ ಗ್ರಾಮೀಣ ರಸ್ತೆ ಅಭಿವೃದ್ಧಿ ನಿಧಿ ಕಾಮಗಾರಿಗಳ ಕ್ರಿಯಾ ಯೋಜನೆ (ರೂ.519.970 ಲಕ್ಷ) | 66.490 |
| 12 | 2007–08ನೇ ಸಾಲಿನ ಗ್ರಾಮೀಣ ಸಂಪರ್ಕದಡಿ ರಸ್ತೆಗಳ ನಿರ್ಮಾಣದ ಕ್ರಿಯಾ ಯೋಜನೆ 5054–04–337–7–01–132 (ರೂ. 51.830 ಲಕ್ಷ) | 6.310 |
| 13 | 2007–08ನೇ ಸಾಲಿನ ರಸ್ತೆ ಮತ್ತು ಸೇತುವೆ ವಿಭಾಗದ ಸೇತುವೆ ಮತ್ತು ಮೋರಿಗಳ ನಿರ್ಮಾಣ ಕ್ರಿಯಾ ಯೋಜನೆ. 5054–04–337–7–02–132 | 0.220 |
| 14 | 2007–08ನೇ ಸಾಲಿನ 12ನೇ ಹಣಕಾಸು ಯೋಜನೆ ರಸ್ತೆ ಅಭಿವೃದ್ಧಿ ಯೋಜನೆ ಕಾಮಗಾರಿಗಳ ಕ್ರಿಯಾ ಯೋಜನೆ (ರೂ.664.770 ಲಕ್ಷ) | 85.130 |
| 15 | 2007–08ನೇ ಸಾಲಿನ 12ನೇ ಹಣಕಾಸು ಯೋಜನೆಯ ಕಾಮಗಾರಿಗಳ ಕ್ರಿಯಾ ಯೋಜನೆ (ರೂ. 69.17 ಲಕ್ಷಗಳು) | 10.520 |
| 16 | 2007–08ನೇ ಸಾಲಿನ 12ನೇ ಹಣಕಾಸು ಅನುದಾನದ ಕಟ್ಟಡಗಳ ವಿಶೇಷ ದುರಸ್ತಿ ಹಾಗೂ ಸಾಮಾನ್ಯ ದುರಸ್ತಿ ಕಾಮಗಾರಿಗಳ ಕ್ರಿಯಾ ಯೋಜನೆ (ರೂ. 236.64 ಲಕ್ಷಗಳು) | 30.000 |
| 17 | RIDF Nabard – XII 2007-08 | 0.000 |
| 18 | 2205-02-800-1-05-10 ಪ್ರೌಢ ಶಾಲೆಗಳ ಕಟ್ಟಡ ನಿರ್ಮಾಣ ಸುಧಾರಣೆ NABARD (416.00 ಲಕ್ಷ) 2007–08 | 100.00 |
| 19. | 2210–03–101–1–73 ಲೆಕ್ಕ ಶೀರ್ಷಿಕೆ ಆರೋಗ್ಯ ಕಟ್ಟಡಗಳ ನಿರ್ವಹಣೆ 2007–08 | 1.900 |
| 20 | 2225–01–277–0–02 ಸಮಾಜ ಕಲ್ಯಾಣ ಪರಿಶಿಷ್ಟ ಜಾತಿ / ಪರಿಶಿಷ್ಟ ವರ್ಗದ ಹಾಸ್ಟೆಲ್ ಕಟ್ಟಡ ನಿರ್ಮಾಣ 2007–08 | 5.500 |
| 21 | 2225–01–277–0–6 ವಸತಿ ಗೃಹಗಳ ಪ್ರಾರಂಭ ಹಾಗೂ ಸುಧಾರಣೆ 2007–08 | 2.000 |
| 22 | 2403–00–101–0–61 ಪಶುಪಾಲನೆ ಮತ್ತು ಪಶುವೈದ್ಯ ಸೇವೆ 2007–08 | 1.500 |
| 23 | ಆರ್.ಐ.ಡಿ.ಎಫ್ ನಬಾರ್ಡ್–11 ಯೋಜನೆಯಡಿ ಚಿಕ್ಕ ಡ್ಯಾಂ ನಿರ್ಮಾಣ 2007–08 | 0.000 |
| 24 | 2007–08ನೇ ಸಾಲಿನ ಸಾಮರ್ಥ ಸೌಧ | 21.000 |
| 25 | ಸುವರ್ಣ ಗ್ರಾಮೋದಯ ಯೋಜನೆಯ ಕಾಮಗಾರಿಗಳು 2007–08 | 467.050 |
| 26 | 2006–07ನೇ ಸಾಲಿನ ಸುವರ್ಣ ಜಲ/ಮಳೆ ನೀರು ಕೊಯ್ಲು ಕಾರ್ಯಕ್ರಮದನ್ವಯ ಗ್ರಾಮೀಣ ಶಾಲೆಗಳಿಗೆ ಮಳೆ ನೀರು ಸಂಗ್ರಹಣೆ ಮಾಡಲು ನೀರು ಪೂರೈಕೆ | 8.710 |

| | | |
|---|---|---|
| 27 | 2007–08ನೇ ಸಾಲಿನ ಎಂ.ಎ.ಡಿ.ಬಿ. ಕಾಮಗಾರಿಗಳು | 25.000 |
| 28 | 2007–08ನೇ ಸಾಲಿನ ಶಾಸಕರ ಪ್ರದೇಶಾಭಿವೃದ್ಧಿ ಅನುದಾನದಡಿ ಕಾಮಗಾರಿಗಳ ಕ್ರಿಯಾ ಯೋಜನೆ | 53.000 |
| 29 | 2007–08ನೇ ಸಾಲಿನ ಬರ ಪರಿಹಾರ ಯೋಜನೆ ಕಾಮಗಾರಿಗಳು | 44.150 |
| 30 | 2007–08ನೇ ಸಾಲಿನ ಬರ ಪರಿಹಾರ ಯೋಜನೆಯಡಿ ಕುಡಿಯುವ ನೀರಿನ ಕಾಮಗಾರಿಗಳ ಕ್ರಿಯಾ ಯೋಜನೆ (ರೂ. 22.00 ಲಕ್ಷಗಳು) | 10.070 |
| 31 | 2007–08ನೇ ಸಾಲಿನ ಬರ ಪರಿಹಾರ ಯೋಜನೆಯಡಿ ಕುಡಿಯುವ ನೀರಿನ ಸರಬರಾಜು ಕಾಮಗಾರಿಗಳ ಕ್ರಿಯಾ ಯೋಜನೆ (ರೂ. 12.43 ಲಕ್ಷಗಳು) | 5.110 |
| 32 | 2007–08ನೇ ಸಾಲಿನ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (SGRY)ಯ ಶೇ. 20.00ರ ಕಾಮಗಾರಿಗಳ ಕ್ರಿಯಾ ಯೋಜನೆ (ರೂ. 137.714 ಲಕ್ಷಗಳು) | 23.717 |

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್

ಪಿ.ಆರ್. ನಂ. 317 ಪಂಚಾಯತ್ ರಾಜ್ ಇಂಜಿನೀಯರಿಂಗ್ ಉಪವಿಭಾಗ, ಹಿರೇಕೆರೂರ

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ದ.ಕ. ಜಿಲ್ಲೆ ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ. : ಎಸ್.ಡಿ.ಕೆ/251/ಡಿಟಿಸಿಆರ್/2006–07, ದಿನಾಂಕ : 15ನೇ ಜುಲೈ, 2008**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್ ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು

**ಫಿರ್ಯಾದುದಾರರು**

ಪೊಲೀಸ್ ಉಪ ನಿರೀಕ್ಷಕರು
ಉಳ್ಳಾಲ ಪೊಲೀಸ್ ಠಾಣೆ
ಉಳ್ಳಾಲ

**ಆರೋಪಿಗಳು**

1) ಶೈನಿ, ಬಿನ್ ದಿ: ವಿನೋದ್, ವಾಸ : ಚುರುಪಟ್ಟಿ ಹೌಸ್, ಮತ್ತಿಲಕಮ್ ಅಂಚೆ, ತ್ರಿಶೂರ್, ಕೇರಳ ರಾಜ್ಯ
2) ರಘುನಾಥ್, ಬಿನ್ ಉಣ್ಣಿಕೃಷ್ಣನ್, ವಾಸ : ಪೊಟ್ಟಿದಾಡೆ ಹೌಸ್, ತೈಕುಟ್ಟುಶೆಂ ಅಂಚೆ, ಚೆರುಪೆರಿ, ತ್ರಿಶೂರ್, ಕೇರಳ ರಾಜ್ಯ
3) ಏಕನಾಥ ಅಲಿಯಾಸ್ ಏಕು, ಬಿನ್ ದಿ. ಭವಾನಿಶಂಕರ, ವಾಸ : ತೊಕ್ಕೊಟ್ಟು ಓವರ್ ಬ್ರಿಡ್ಜ್‌ನ ಬಳಿ, ತೊಕ್ಕೊಟ್ಟು (ಪರಾರಿಯಾಗಿರುತ್ತಾರೆ.)

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು, ಉಳ್ಳಾಲ ಪೊಲೀಸ್ ಠಾಣೆ, ಉಳ್ಳಾಲ ಇವರು ತಮ್ಮ ಸಿಬ್ಬಂದಿಯವರೊಂದಿಗೆ ದಿ: 13.12.2006 ರಂದು ಬೆಳಿಗ್ಗೆ 11:00 ಗಂಟೆ ಸಮಯದಲ್ಲಿ ಮಂಗಳೂರು ತಾಲ್ಲೂಕು ಪೆರ್ಮನ್ನೂರು ಗ್ರಾಮದ ನಾಗನಕಟ್ಟೆ ಬಳಿ ತೊಕ್ಕೊಟ್ಟು ಎಂಬಲ್ಲಿ ವಾಹನ ತಪಾಸಣೆ ಮಾಡುತ್ತಿದ್ದ ಸಂದರ್ಭದಲ್ಲಿ ಲಾರಿ ನೋಂದಣಿ ಸಂಖ್ಯೆ ಕೆ.ಎಲ್.–11–4169ನ್ನು ತಪಾಸಣೆಗೆಂದು ನಿಲ್ಲಿಸಲು ಸೂಚನೆ ನೀಡಿದಾಗ ವಾಹನ ಚಾಲಕ ಲಾರಿಯನ್ನು ನಿಲ್ಲಿಸದೇ ಸ್ವಲ್ಪ ಮುಂದೆ ಹೋಗಿ ನಿಲ್ಲಿಸಿ ಸದ್ರಿ ಲಾರಿಯಿಂದ 3 ಜನರು ಇಳಿದು ಓಡಲು ಪ್ರಯತ್ನಿಸಿದ್ದು, ಸಿಬ್ಬಂದಿಯವರು ಬೆನ್ನಟ್ಟಿ ಶೈನಿ ಮತ್ತು ರಘುನಾಥರವರನ್ನು ಹಿಡಿದು ವಿಚಾರಿಸಿದಾಗ ಸದ್ರಿ ಲಾರಿಯಲ್ಲಿ ತಲಾ 35 ಲೀಟರ್ ಸ್ಪಿರಿಟ್ ತುಂಬಿದ 22 ಬಿಳಿ ಪ್ಲಾಸ್ಟಿಕ್ ಕ್ಯಾನುಗಳಲ್ಲಿ 770 ಲೀಟರ್ ಮದ್ಯಸಾರವನ್ನು ಹೊಂದಿ ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೇ ಸಾಗಾಟ ಮಾಡಿರುವುದು ಎಂದು ತಿಳಿಸಿರುತ್ತಾರೆ. ಇದು ಕರ್ನಾಟಕ ಅಬಕಾರಿ ಕಾಯಿದೆ 13(1), 32, 34 ಮತ್ತು 43ಎ ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ ತಕ್ಷೀರು ನಡೆದ ಸ್ಥಳದಲ್ಲಿ ಪತ್ತೆಯಾದ ಆರೋಪಿಗಳ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ 1) ಶೈನಿ, ಬಿನ್ ದಿ: ವಿನೋದ್, ವಾಸ ಚುರುಪಟ್ಟಿ ಹೌಸ್, ಮತ್ತಿಲಕಮ್ ಅಂಚೆ, ತ್ರಿಶೂರ್, ಕೇರಳ ರಾಜ್ಯ 2) ರಘುನಾಥ್, ಬಿನ್ ಉಣ್ಣಿಕೃಷ್ಣನ್, ವಾಸ : ಪೊಟ್ಟನಾಡೆ ಹೌಸ್, ತೈಕುಟ್ಟುಶೆಂ ಅಂಚೆ, ಚೆರುಪೆರಿ, ತ್ರಿಶೂರ್, ಕೇರಳ ರಾಜ್ಯ ಮತ್ತು ಪರಾರಿಯಾದ ವ್ಯಕ್ತಿ ಏಕನಾಥ ಅಲಿಯಾಸ್ ಏಕು, ಬಿನ್ ದಿ. ಭವಾನಿಶಂಕರ, ವಾಸ : ತೊಕ್ಕೊಟ್ಟು ಓವರ್ ಬ್ರಿಡ್ಜ್‌ನ ಬಳಿ, ತೊಕ್ಕೊಟ್ಟು ಎಂದು ತಿಳಿಸಿದ್ದು, ಕ್ರ.ಸಂ. 1 ಮತ್ತು 2 ರಲ್ಲಿರುವ ಆರೋಪಿಗಳನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ, ಪಂಚರ ಸಮಕ್ಷಮ ಸದರಿ ಸೊತ್ತುಗಳನ್ನು ಜಪ್ತು ಮಾಡಿ ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ ಆರೋಪಿಗಳ ವಿರುದ್ಧ ತಕ್ಷೀರು ಸಂಖ್ಯೆ 364/2006, ದಿನಾಂಕ : 13.12.2006 ರಂತೆ ಪ್ರಕರಣವನ್ನು ನೋಂದಾಯಿಸಿ ಪ್ರಥಮ ಮಾಹಿತಿ ವರದಿ, ಮಹಜರು ಪ್ರತಿ ಹಾಗೂ ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ವಶಪಡಿಸಿಕೊಂಡ ಸೊತ್ತುಗಳನ್ನು ಕಡತದೊಂದಿಗೆ ಅಬಕಾರಿ ಉಪ ನಿರೀಕ್ಷಕರು, ಜಾರಿ ಮತ್ತು ತನಿಖೆ ಮಂಗಳೂರು ದಕ್ಷಿಣ ಇವರಿಗೆ ಈ ಪ್ರಾಧಿಕಾರದ ಆದೇಶದ ಮೇರೆಗೆ ಮುಂದಿನ ತನಿಖೆಗಾಗಿ ಹಸ್ತಾಂತರಿಸಿರುತ್ತಾರೆ.

ಮೊಕದ್ದಮೆಯ ತನಿಖೆಯನ್ನು ಕೈಗೊಂಡ ಅಬಕಾರಿ ಉಪ ನಿರೀಕ್ಷಕರು (1) ಜಾರಿ ಮತ್ತು ತನಿಖೆ, ಮಂಗಳೂರು ದಕ್ಷಿಣ, ಮಂಗಳೂರು ಇವರು ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮದ್ಯಸಾರದಿಂದ 22 ಪ್ಲಾಸ್ಟಿಕ್ ಕ್ಯಾನುಗಳಿಂದ ತಲಾ 750 ಎಂ.ಎಲ್. ನ ಒಟ್ಟು 22 ಬಾಟಲುಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಸದ್ರಿ ಮಾದರಿಗಳನ್ನು ವಿಶ್ಲೇಷಿಸಿದ

ಮುಖ್ಯ ರಾಸಾಯನಿಕ ತಜ್ಞ ಮತ್ತು ಕರ್ನಾಟಕ ಸರ್ಕಾರದ ಪದನಿಮಿತ್ತ, ಬೆಂಗಳೂರುರವರ ಪತ್ರ ಸಂ: 1006/2007 ದಿ: 24.3.2007ರ ವರದಿಯಲ್ಲಿ ಮದ್ಯಸಾರದ ಪ್ರಮಾಣ 66.1 ಡಿಗ್ರಿ ರಿಂದ 66.4 ಡಿಗ್ರಿ ಒ. ಪಿ. ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ತನಿಖಾಧಿಕಾರಿಯವರು ಜಪ್ತುಪಡಿಸಿಕೊಂಡ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ದಿ: 3.4.2007 ರಂದು ನೀಡಿದ ವರದಿಯನ್ನು ಆಧರಿಸಿ, ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಇಐಬಿ, ದ. ಕ.ಜಿಲ್ಲೆ ಮಂಗಳೂರು ಇವರ ಆದೇಶ ಸಂ: ಇಐಬಿ/ಡಿಟಿಸಿಆರ್/251/2006–07 ದಿ: 10–4–2007ರಲ್ಲಿ ಜಪ್ತು ಪಡಿಸಿಕೊಂಡಿರುವ 770 ಲೀ ಮದ್ಯಸಾರವನ್ನು (ಮಾದರಿಗಳನ್ನು ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಸಿ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅಬಕಾರಿ ಉಪ ಅಧೀಕ್ಷಕರು, ಮಂಗಳೂರು ಉಪ ವಿಭಾಗ, ಮಂಗಳೂರು ಇವರ ಸಮಕ್ಷಮ ದಿ: 31–3–2008 ರಂದು ಮಹಜರು ಜರುಗಿಸಿ ನಾಶಪಡಿಸಲಾಗಿದೆ.

ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಲಾರಿ ಸಂ. ಕೆ.ಎಲ್–1–4169ರ ಆರ್.ಸಿ. ಮಾಲೀಕರ ಹೆಸರು ಮತ್ತು ವಿಳಾಸವನ್ನು ನೀಡುವ ಬಗ್ಗೆ ಸಂಬಂಧಪಟ್ಟ ರೀಜನಲ್ ಟ್ರಾನ್ಸ್‌ಪೋರ್ಟ್ ಆಫೀಸರ್ ತಿರುವನಂತಪುರಂ, ಕೇರಳ ರಾಜ್ಯ ಇವರಿಗೆ ಈ ಪ್ರಾಧಿಕಾರದಿಂದ ದಿ: 10–4–2007, 2.8.2007 ರಂದು ಪತ್ರ ಬರೆಯಲಾಗಿದ್ದು, ಸದರಿ ಪತ್ರವು ಜ್ಯಾರಿಯಾದ ಬಗ್ಗೆ ಸ್ವೀಕೃತಿ ಪತ್ರ ಈ ಕಛೇರಿಗೆ ಬಂದಿರುತ್ತದೆ. ತದನಂತರದಲ್ಲಿ ರೀಜನಲ್ ಟ್ರಾನ್ಸ್‌ಪೋರ್ಟ್ ಆಫೀಸರ್ ತಿರುವನಂತಪುರಂ, ಕೇರಳ ರಾಜ್ಯದವರು ದಿ: 18.9.2007ರ ಪತ್ರದಲ್ಲಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಲಾರಿ ಸಂ. ಕೆ.ಎಲ್.–1–4169ರ ಬಿ ಎಕ್ಸ್ ಟ್ರಾಕ್ಟ್ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ರೀಜನಲ್ ಟ್ರಾನ್ಸ್‌ಪೋರ್ಟ್ ಆಫೀಸರ್ ತಿರುವನಂತಪುರಂ, ಕೇರಳ ರಾಜ್ಯ ಇವರು ಸಲ್ಲಿಸಿದ್ದ ಬಿ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ವಾಹನ ಲಾರಿ ಸಂ. ಕೆ.ಎಲ್.–1–4169 ವಾಹನವು ಬಜಾಜ್ ಆಟೋ ಲಿಮಿಟೆಡ್ ತ್ರಿಚಕ್ರ ವಾಹನವಾಗಿದ್ದು, ಇದರ ಚಾಸೀಸ್ ನಂ. ಡಬ್ಲ್ಯೂ24ಸಿಓ35336 ಮತ್ತು ಇಂಜಿನ್ ನಂ. ಡಬ್ಲ್ಯೂ24ಇ.ಓ.35915 ಎಂದು ದೃಢೀಕರಿಸಿರುತ್ತಾರೆ.

ಸದರಿ ಮೊಕದ್ದಮೆಯಲ್ಲಿ ದಸ್ತಗಿರಿ ಹಾಗೂ ಪರಾರಿಯಾದ ಆರೋಪಿಗಳಿಗೆ ಈ ಪ್ರಾಧಿಕಾರದಿಂದ ದಿ: 26.9.2007 ರಂದು ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43 ಬಿ ಪ್ರಕಾರ ಕಾರಣ ಕೇಳಿ ನೋಟಿಸನ್ನು ನೀಡಲಾಗಿದ್ದು ಸದರಿ ಕಾರಣ ಕೇಳಿ ನೋಟಿಸಿನಲ್ಲಿ ಜಪ್ತಾದ ವಾಹನ ಸಂ. ಕೆ.ಎಲ್.–1–4169 ಲಾರಿಯಾಗಿದ್ದು, ಇದಕ್ಕೆ ನಕಲಿ ನಂಬರ್ ಅಳವಡಿಸಿ ಅಕ್ರಮ ಮದ್ಯಸಾರ ಸಾಗಾಣಿಕೆ ಬಳಸಿರುವುದು ಹಾಗೂ ಕರ್ನಾಟಕ ಅಬಕಾರಿ ಕಾಯಿದೆ ಕಲಂ 43 ಎ ರಂತೆ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಈ ನೋಟೀಸು ತಲುಪಿದ 15 ದಿವಸದೊಳಗೆ ಈ ಪ್ರಾಧಿಕಾರಕ್ಕೆ ವಿವರಣೆಯನ್ನು ಸಲ್ಲಿಸಲು ಸೂಚಿಸಲಾಗಿತ್ತು.

ಈ ಪ್ರಾಧಿಕಾರದಿಂದ ನೀಡಿರುವ ಕಾರಣ ಕೇಳುವ ನೋಟಿಸನ್ನು 1ನೇ ಆರೋಪಿಯಾದ ಶೈನಿ, ಬಿನ್: ವಿನೋದ್, ವಾಸ : ಚುರುಪಟ್ಟಿ ಹೌಸ್, ಮತ್ತಿಲಕಮ್ ಅಂಚೆ, ತ್ರಿಶೂರ್, ಕೇರಳ ರಾಜ್ಯರವರು ದಿ: 10.10.2007 ರಂದು ಪಡೆದಿದ್ದು, ಸ್ವೀಕೃತಿ ಪತ್ರ ಬಂದಿರುತ್ತದೆ. ಆದರೆ ಸದ್ರಿ ಕಾರಣ ಕೇಳಿ ನೋಟಿಸಿಗೆ ಯಾವುದೇ ಉತ್ತರ ಅಥವಾ ಪ್ರತಿಕ್ರಿಯೆ ಇದುವರೆಗೂ ನೀಡಿರುವುದಿಲ್ಲ.

ಪೊಲೀಸ್ ಉಪ ನಿರೀಕ್ಷಕರು, ಉಳ್ಳಾಲ ಪೊಲೀಸ್ ಠಾಣೆ, ಉಳ್ಳಾಲ ಇವರು ದಿ: 13.12.06 ರಂದು ಯಾವುದೇ ಅಧಿಕೃತ ರಹದಾರಿ ಪತ್ರ ಇಲ್ಲದೇ ಅಕ್ರಮ 770 ಲೀ ಮದ್ಯಸಾರವನ್ನು ಲಾರಿ ಸಂ ಕೆ.ಎಲ್.–1–4169ರ ನಕಲಿ ನಂಬರ್ ಪ್ಲೇಟನ್ನು ಅಳವಡಿಸಿ ಆರೋಪಿಗಳು ಸಾಗಾಣಿಕೆ ಮಾಡುತ್ತಿರುವುದು ಖಚಿತವಾಗಿದ್ದು, ತಕ್ಷೀರಿನಲ್ಲಿ ವಶಪಡಿಸಿಕೊಂಡ ಇಂಜಿನ್ ನಂಬರ್ ಮತ್ತು ಚಾಸೀಸ್ ನಂಬರ್ ಸಾರಿಗೆ ಅಧಿಕಾರಿಗಳು ನೀಡಿರುವ ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ವಶಪಡಿಸಿಕೊಂಡ ವಾಹನಕ್ಕೆ ಒಂದಕ್ಕೊಂದು ತಾಳೆಯಾಗಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷ್ಯಾಧಾರಗಳೊಂದಿಗೆ ಸಾಬೀತು ಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ 13.12.2006 ರಂದು ಲಾರಿ ಸಂ. ಕೆ.ಎಲ್.–1–4169 ರಲ್ಲಿ ನಕಲಿ ಸಂಖ್ಯೆ ಇರಿಸಿಕೊಂಡು ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೇ ಆರೋಪಿಗಳು 770.000 ಲೀ ಮದ್ಯಸಾರವನ್ನು ಹೊಂದಿ ಸಾಗಾಟ ಮಾಡುತ್ತಿದ್ದುದನ್ನು ಪೊಲೀಸ್ ಉಪ ನಿರೀಕ್ಷಕರು, ಉಳ್ಳಾಲ ಪೊಲೀಸ್ ಠಾಣೆ, ಉಳ್ಳಾಲರವರು ಪತ್ತೆಹಚ್ಚಿ ಅಕ್ರಮ ಮದ್ಯಸಾರ ಸಾಗಾಣಿಕೆಗೆ ಬಳಸಲಾದ ವಾಹನವನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿಯಂತೆ ಮದ್ಯಸಾರವಾಗಿದ್ದು, ಸದರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗೆ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಪೊಲೀಸ್ ಉಪ ನಿರೀಕ್ಷಕರು, ಉಳ್ಳಾಲ ಪೊಲೀಸ್ ಠಾಣೆ ಉಳ್ಳಾಲ ಇವರು ವಶಪಡಿಸಿಕೊಂಡ ಲಾರಿ ನಕಲಿ ಸಂ. ಕೆ.ಎಲ್.–1–4169 ನ್ನು ವಶಪಡಿಸಿಕೊಂಡು ಸುಮಾರು 1 ವರ್ಷ 8 ತಿಂಗಳಿಗಿಂತ ಹೆಚ್ಚು ಸಮಯ ಕಳೆದಿದ್ದು, ಒಂದನೇ ಆರೋಪಿಯಾದ ಶೈನಿರವರಿಗೆ ನೀಡಿದ ಕಾರಣಕೇಳಿ ನೋಟಿಸು

ಸ್ವೀಕೃತಿಯಾಗಿದ್ದರೂ, ಈ ಪ್ರಾಧಿಕಾರದ ಮುಂದೆ ವಾಹನ ಬಿಡುಗಡೆಗಾಗಿ ಮತ್ತು ವಾಹನವು ಅಕ್ರಮ ಮದ್ಯಸಾರ ಸಾಗಾಟದಲ್ಲಿ ತೊಡಗಿಲ್ಲವೆಂದು ಸಾಬೀತುಪಡಿಸಲು ಯಾವುದೇ ಸಮಂಜಸವಾದ ಉತ್ತರ ಈ ಪ್ರಾಧಿಕಾರದ ಮುಂದೆ ಒಪ್ಪಿಸದಿರುವುದರಿಂದ ಮತ್ತು ವಾಹನ ಮಾಲೀಕರು ಸೂಕ್ತ ದಾಖಲಾತಿಗಳೊಂದಿಗೆ ವಾಹನದ ಮಾಲೀಕತ್ವವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಸದರಿ ವಾಹನಕ್ಕೆ ಅಳವಡಿಸಲಾಗಿರುವ ನಕಲಿ ನಂಬರ್ ಪ್ಲೇಟು ಸಂ. ಕೆ.ಎಲ್.–1–4169 ಇದು ನೈಜವಾಗಿ ಒಂದು ಬಜಾಜ್ ತ್ರಿಚಕ್ರ ವಾಹನದ ನೋಂದಣಿ ಸಂಖ್ಯೆ ಎಂಬುದಾಗಿ ಪ್ರಾದೇಶಿಕ ಅಧಿಕಾರಿಗಳು ತಿರುವನಂತಪುರಂ ಇವರು ನೀಡಿರುವ ಬಿ ಎಕ್ಸ್ ಟ್ರಾಕ್ಟ್ ವರದಿ ಹಾಗೂ ತತ್ಸಂಬಂಧ ಬಾಬು ಜಾನ್ ಸಾಹೇಬ್, ಟಿ.ಸಿ. ನಂ. :7/527ಎ, ಪಡೀನ್‌ಚಾರೀಲ, ಪುತ್ತೇನ್ ವಿಡು, ತಿರುವನಂತಪುರಂ ಎಂಬುವ ಈ ಪ್ರಾಧಿಕಾರಕ್ಕೆ ಒಪ್ಪಿಸಿರುವ ಲಿಖಿತ ಪತ್ರ ದಿ: 10–10–2007 ರಂತೆ ಸದರಿ ರಿಜಿಸ್ಟ್ರಾರ್ ಸಂಖ್ಯೆಯ ವಾಹನ ಅವರದಾಗಿದ್ದು ಇದು ಬಜಾಜ್ ತ್ರಿಚಕ್ರ ಆಟೋ ಎಂಬುದಾಗಿ ತಿಳಿಸಿರುವ ಕಾರಣ ಜಪ್ತಿ ಮಾಡಲಾಗಿರುವ ಲಾರಿಯನ್ನು ಆರೋಪಿಗಳು ಸದರಿ ವಾಹನಕ್ಕೆ ನಕಲಿ ನಂಬರ್ ಪ್ಲೇಟ್ ಅಳವಡಿಸಿ ಅಕ್ರಮ ಮದ್ಯಸಾರವನ್ನು ಸಾಗಾಟ ಮಾಡಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿ ಕಂಡು ಬರುತ್ತದೆ. ಆರೋಪಿಗಳು ಮದ್ಯಸಾರವನ್ನು ಮಾರಾಟ ಮಾಡಲೆಂಬ ಉದ್ದೇಶದಿಂದ ಕೇರಳ ರಾಜ್ಯಕ್ಕೆ ಸಾಗಾಟ ಮಾಡಿರುವುದು ಸ್ಪಷ್ಟವಾಗಿ ಕಾಣಬರುತ್ತದೆ. ಹಾಗೂ ಆರೋಪಿಗಳನ್ನು ಪತ್ತೆ ಹಚ್ಚಲು ಕಷ್ಟಸಾಧ್ಯವಾಗಿರುವುದರಿಂದ ಹಾಗೂ ವಶಪಡಿಸಿಕೊಂಡ ಲಾರಿಯನ್ನು 1 ವರ್ಷ 8 ತಿಂಗಳು ಕಳೆದಿದ್ದರೂ ವಾಹನದ ಮಾಲೀಕತ್ವವನ್ನು ಕೋರಿ ಪ್ರಾಧಿಕಾರಕ್ಕೆ ಯಾರೂ ಅರ್ಜಿಯನ್ನು ಸಲ್ಲಿಸದೇ ಇರುವ ಕಾರಣ, ಸದರಿ ವಾಹನವನ್ನು ತೆರೆದಿಟ್ಟ ಬಯಲಿನಲ್ಲಿ ನಿಲ್ಲಿಸಿರುವುದರಿಂದ ಮಳೆ, ಬಿಸಿಲು, ಗಾಳಿಗೆ ಸಿಲುಕಿ ತುಕ್ಕು ಹಿಡಿದು ಹಾಳಾಗಿ ಹೋಗಿರುತ್ತದೆ. ಇದನ್ನು ಇನ್ನು ಹೆಚ್ಚು ಕಾಲ ಇರಿಸಿಕೊಂಡರೆ ಇನ್ನಷ್ಟು ಶಿಥಿಲಗೊಂಡು ಮೌಲ್ಯಹೀನವಾಗುವ ಸಾಧ್ಯತೆಯಿದ್ದು ಸರ್ಕಾರಕ್ಕೆ ಬರುವ ಆದಾಯ ಕೂಡಾ ಕಡಿಮೆಯಾಗುವ ಸಂಭವವಿರುವುದರಿಂದ ಅಕ್ರಮ ಅಬಕಾರಿ ಸೊತ್ತು ಸಾಗಾಣಿಕೆಗೆ ಬಳಸಿದ ಲಾರಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂಬ ಹಿನ್ನೆಲೆಯಲ್ಲಿ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ಉಪ ನಿರೀಕ್ಷಕರು, ಉಳ್ಳಾಲ ಪೊಲೀಸ್ ಠಾಣಾ ಉಳ್ಳಾಲ ಇವರ ಕ್ರೈಂ ನಂಬರ್ 364/2006, ದಿನಾಂಕ: 13–12–2006 ರಲ್ಲಿ ಜಪ್ತು ಪಡಿಸಿರುವ ಲಾರಿ ನಕಲಿ ಸಂ. ಕೆ.ಎಲ್.–01–4169 ನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ : 15–7–2008 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು

ಪಿ.ಆರ್. ನಂ. 918

## ಬಂದರು ಕಛೇರಿ, ಕಾರವಾರ

## ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005ದ 4ನೇ ಪ್ರಕರಣದ (ಬಿ) ಖಂಡದ ಅಡಿಯಲ್ಲಿ ವಿವರಣೆಗಳ ಪ್ರಕಟಣೆ

**ಕ್ರಮಾಂಕ : ಪಿಎಎಸ್/ಸಿಆರ್–13/2007–08, ದಿನಾಂಕ:29ನೇ ಮೇ, 2008**

**ವಿಷಯ :–** ಮಾಹಿತಿ ಹಕ್ಕು ಅಧಿನಿಯಮ 2005ರ ಅಡಿಯಲ್ಲಿ ಕಡ್ಡಾಯವಾಗಿ ಪ್ರಕಟಿಸಬೇಕಾದ ಬಂದರು ಕಛೇರಿ, ಕಾರವಾರಕ್ಕೆ ಸಂಬಂಧಿಸಿದ ವಿವರಗಳ ಪ್ರಕಟಣೆ.

**1. ರಚನೆ ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು :**

ಬಂದರು ಕಛೇರಿ, ಕಾರವಾರವು ಕಾರವಾರದ ಬೈತಖೋಲದಲ್ಲಿರುವ ಇಲಾಖಾ ಕಟ್ಟಡದಲ್ಲಿ ಇದೆ, ಕ್ಯಾ.ಸಿ.ಸ್ವಾಮಿ, ಇವರು ಬಂದರು ಅಧಿಕಾರಿ, ಕಾರವಾರ ಹುದ್ದೆಯಲ್ಲಿ ಕರ್ತವ್ಯವನ್ನು ನಿರ್ವಹಿಸುತ್ತಿದ್ದು, ಇವರ ಅಧೀನದಲ್ಲಿ ಶ್ರೀ ಟಿ.ಆರ್. ನಾಯ್ಕ, ಬಂದರು ಸಂರಕ್ಷಣಾಧಿಕಾರಿ, ಶ್ರೀ ಸುರೇಶ .ಡಿ. ಶೆಟ್ಟಿ, ಬಂದರು ಸಂರಕ್ಷಣಾಧಿಕಾರಿ (ಸಂಚಾರಿ), ಶ್ರೀ ಬಿ.ಬಿ. ತುಮರಿಕೊಪ್ಪ ಬಂದರು ಸಂರಕ್ಷಣಾಧಿಕಾರಿ, ಶ್ರೀ ದೀಪಕ್ ಪರುಳೇಕರ, ಉ.ಬಂದರು ಸಂರಕ್ಷಣಾಧಿಕಾರಿ, ಶ್ರೀ ಗೌಸ ಅಲಿ, ಉಪ ಬಂದರು ಸಂರಕ್ಷಣಾಧಿಕಾರಿ, ಶ್ರೀ ಪಿ.ಡಿ. ತಾರಿಬಾಗಿಲ್ ಉಪ ಕಡವು ನಿರೀಕ್ಷಕ, ಶ್ರೀ ಎಸ್.ವಿ. ತಾಮಸೆ, ಸಹಾಯಕ ಬಂದರು ಸಂರಕ್ಷಣಾಧಿಕಾರಿ ಕಾರ್ಯಭಾರವನ್ನು ನಿರ್ವಹಿಸುತ್ತಿದ್ದು, ಕಛೇರಿಯಲ್ಲಿ ಒಟ್ಟು 11 ಗ್ರೂಪ್ "ಸಿ" ಹುದ್ದೆಯ ನೌಕರರು ಹಾಗೂ 29 ಗ್ರೂಪ್ "ಡಿ" ನೌಕರರು ಕರ್ತವ್ಯವನ್ನು ನಿರ್ವಹಿಸುತ್ತಿದ್ದಾರೆ, ಬಂದರು ಕಛೇರಿ, ಕಾರವಾರದ ಅಧೀನದಲ್ಲಿ ಶ್ರೀ ಮಹೇಶ ಬಿಲಿಯ, ಉಪ ಬಂದರು ಸಂರಕ್ಷಣಾಧಿಕಾರಿ, ಬೇಲೇಕೇರಿ ಹಾಗೂ ಶ್ರೀ ದೀಪಕ್ ಪರುಳೇಕರ ಉಪ ಬಂದರು ಸಂರಕ್ಷಣಾಧಿಕಾರಿ, ಸದಾಶಿವಗಡ (ಪ್ರಭಾರ) ಇವರು ಕರ್ತವ್ಯವನ್ನು ನಿರ್ವಹಿಸುತ್ತಿದ್ದಾರೆ.

ಕಛೇರಿಯ ಪ್ರಕಾರ್ಯಗಳು ಈ ಮುಂದಿನಂತಿದೆ.

ಕಛೇರಿಗೆ ಹಂಚಿಕೆಯಾಗುವ ಕಾರ್ಯಕಲಾಪಗಳು :–

ಈ ಕಛೇರಿಯ ನಿಯಂತ್ರಣದಲ್ಲಿ ಈ ಕೆಳಕಂಡ ಕಾರ್ಯಾಲಯಗಳು ಬರುತ್ತವೆ.

1. ಬಂದರು ಅಧಿಕಾರಿಯವರ ಕಛೇರಿ, ಕಾರವಾರ
2. ಬಂದರು ಕಛೇರಿ, ಬೇಲೇಕೇರಿ
3. ಬಂದರು ಕಛೇರಿ, ಸದಾಶಿವಗಡ

ಈ ಎಲ್ಲಾ ಕಛೇರಿಗಳ ಮೂಲಕ ಕಾರ್ಯಕಲಾಪಗಳನ್ನು ನಿರ್ವಹಿಸುತ್ತಿದ್ದು ಪ್ರಮುಖವಾಗಿ ಈ ಕೆಳಕಂಡ ವಿಷಯಗಳು ಈ ಕಛೇರಿಯ ಕಾರ್ಯವ್ಯಾಪ್ತಿಯಲ್ಲಿ ಬರುತ್ತವೆ.

1. ಕಾರವಾರ, ಸದಾಶಿವಗಡ, ಬೇಲೇಕೇರಿ ಬಂದರುಗಳ ನಿರ್ವಹಣೆ.
2. ಕಾರವಾರ, ಬೇಲೇಕೇರಿ ಸದಾಶಿವಗಡ ಬಂದರುಗಳ ನೌಕಾಚಟುವಟಿಕೆಗಳು, ಸರಕು ಹೇರಿಳಿಸುವ ಚಟುವಟಿಕೆಗಳ ಸುವ್ಯವಸ್ಥಿತ ನಿರ್ವಹಣೆ.
3. ಕಾರವಾರ ಬಂದರಿಗೆ ಆಗಮಿಸುವ ಹಡಗುಗಳ ಬರ್ತಿಂಗ್/ಅನ್‌ಬರ್ತಿಂಗ್, ಪೈಲೆಟೇಜ್ ಸೇವೆಯನ್ನು ಒದಗಿಸುವುದು.
4. ನೌಕಾ ಚಟುವಟಿಕೆಗಳಿಂದ, ಸರಕು ನಿರ್ವಹಣೆಯಿಂದ, ಧಕ್ಕೆಯ ಬಳಕೆಯಿಂದ ಸರ್ಕಾರಕ್ಕೆ ಬರುವ ಶುಲ್ಕವನ್ನು ಆಕರಿಸುವುದು.
5. ಬಂದರು ಭೂಮಿಯ ನಿರ್ವಾಹಣೆ ಹಾಗೂ ನೌಕಾ ಚಟುವಟಿಕೆಗಳಿಗೆ ಪೂರಕವಾದ ಉದ್ದಿಮೆಗಳಿಗೆ ಬಂದರು ಭೂಮಿಯನ್ನು ಗುತ್ತಿಗೆ / ಬಾಡಿಗೆಯ ಮೇಲೆ ನೀಡುವುದು ಮತ್ತು ಬಾಡಿಗೆ ವಸೂಲಾತಿ
6. ಕಾರವಾರ ಬಂದರಿನಲ್ಲಿ ನೌಕಾಚಟುವಟಿಕೆಗಳಿಗೆ ಅವಶ್ಯ ಇರುವ ತೇಲು ನೌಕೆಗಳ ನಿರ್ವಹಣೆ.
7. ಮೀನುಗಾರಿಕೆ ನಾವೆಗಳ ನೋಂದಣಿ ಮತ್ತು ವಾರ್ಷಿಕ ಪರಿಶೀಲನೆ.
8. ಹಾಯಿ ಹಡುಗುಗಳ ನೋಂದಣಿ ಮತ್ತು ವಾರ್ಷಿಕ ಪರಿಶೀಲನೆ.
9. ನಾವೆಗಳಿಗೆ ದಾರಿದೀಪ/ದೀಪಸ್ತಂಭ, ಮಾರ್ಗದರ್ಶಿ ತೇಲು ಬುರುಡೆ ಇತ್ಯಾದಿಗಳನ್ನು ಒದಗಿಸುವುದು.
10. ಕರ್ನಾಟಕ ಹಾರ್ಬರ್ ಕ್ರಾಫ್ಟ್ ನಿಯಮಗಳ ಅಡಿಯಲ್ಲಿ ತೇಲು ನೌಕೆಗಳಿಗೆ ಪರವಾನಗಿ ತೇಲು ನೌಕೆಯ ಸಾರಂಗ, ಇವರುಗಳಿಗೆ ಅರ್ಹತಾ ಪ್ರಮಾಣ ಪತ್ರವನ್ನು ನೀಡುವುದು.
11. ಕೇಂದ್ರ ಸರ್ಕಾರದ ಮರ್ಕೆಂಟೈಲ್ ಮರೈನ್ ಇಲಾಖೆಯ ಪರವಾಗಿ ನೌಕಾ ಅಪಘಾತಗಳ ವರದಿ/ತನಿಖೆ ಇತ್ಯಾದಿ ಹಾಗೂ ಹಡಗು ಸಿಬ್ಬಂದಿಗಳಿಗೆ ಸೈನ್ ಆಫ್/ಸೈನ್ ಆನ್ ಸೌಲಭ್ಯಗಳನ್ನು ಒದಗಿಸುವುದು.
12. ಕಛೇರಿಯ ಎಲ್ಲಾ ಅಧಿಕಾರಿ/ನೌಕರರ ಸೇವಾ ವಿಷಯಗಳು.
13. ಕರ್ನಾಟಕ ಇನ್‌ಲ್ಯಾಂಡ್ ವೆಸಕ್ಕ್ ರೂಲ್ಸ್ 2006 ರಂತೆ I.V ಸರ್ವೆ ಕಾರ್ಯಗಳು.

**ಬಂದರು ಕಛೇರಿ ಕಾರವಾರದ ಅಧಿಕಾರಿಗಳ ಮತ್ತು ನೌಕರರ ಕರ್ತವ್ಯಗಳು ಮತ್ತು ಅವರು ನಿರ್ವಹಿಸುವ ವಿಷಯಗಳು ಈ ಕೆಳಕಂಡಂತಿದೆ.**

ಅಧಿಕಾರಿಗಳ ಹೆಸರು ಮತ್ತು ಕೆಲಸದ ಹಂಚಿಕೆ :–

| ಕ್ರ. ಸಂ. | ಅಧಿಕಾರಿಯ ಹೆಸರು ಮತ್ತು ಪದನಾಮ | ಅವರು ನಿರ್ವಹಿಸುವ ವಿಷಯ |
|---|---|---|
| 1 | 2 | 3 |
| 1. | ಕ್ಯಾ. ಸಿ. ಸ್ವಾಮಿ,<br>ಬಂದರು ಅಧಿಕಾರಿ, ಕಾರವಾರ | ಕಛೇರಿಯ ಎಲ್ಲಾ ವಿಷಯಗಳ ಪ್ರಭಾರ |
| 2. | ಶ್ರೀ ಟಿ.ಆರ್. ನಾಯ್ಕ,<br>ಬಂದರು ಸಂರಕ್ಷಣಾಧಿಕಾರಿ | ಬಂದರು ಭೂಮಿಯ ನಿರ್ವಹಣೆ, ಬಾಡಿಗೆ ವಸೂಲಾತಿ, ಇಲಾಖಾ ಕಟ್ಟಡಗಳ ಬಾಡಿಗೆ ವಸೂಲಾತಿ, ಬಂದರು ಸೇವೆ, ನೌಕಾ ಚಟುವಟಿಕೆಗಳ, ವಾಹನ ಶುಲ್ಕ ಸರಕು ಹೇರಿಳಿಸುವ ಸೇವೆಗಳ ಶುಲ್ಕ ವಸೂಲಾತಿ, ಗೋದಾಮು ಬಾಡಿಗೆ ವಸೂಲಾತಿ, ಮೀನುಗಾರಿಕೆ ನಾವೆ, ಹಾಯಿ ಹಡಗು, ಹಾರ್ಬರ್ ಕ್ರಾಫ್ಟ್ ನಿಯಮ |
| 3. | ಶ್ರೀ ಪಿ.ಡಿ. ತಾರಿಬಾಗಿಲ್<br>ಕಡವು ಉಪ ನಿರೀಕ್ಷಕರ ಉಪ ಬಂದರು ಸಂರಕ್ಷಣಾಧಿಕಾರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಣೆ. | ಲೇಖನ ಸಾಮಗ್ರಿ ಹಾಗೂ ಸರಕು ವಿಭಾಗದ ಸಂಪೂರ್ಣ ನಿರ್ವಹಣೆ, ಸಮಾರಂಭಗಳು ಮಾಸಿಕ ದಿನಚರಿ ನಿರ್ವಹಣೆ ಹಾಗೂ ಇತರೇ ವಿಷಯಕ್ಕೆ ಸಂಬಂಧಿಸಿದ ಕಾರ್ಯ ನಿರ್ವಹಣೆ. |
| 4. | ಶ್ರೀ ಗೌಸ ಅಲಿ,<br>ಸಹಾಯಕ ಬಂದರು ಸಂರಕ್ಷಣಾಧಿಕಾರಿ | ವೇತನ ಬಿಲ್ಲು, ಪ್ರಯಾಣ ಭತ್ಯೆ ಬಿಲ್ಲು, ವೈದ್ಯಕೀಯ ಬಿಲ್ಲು, ಕೆ.ಜಿ.ಐ.ಡಿ. ಮತ್ತು ಜಿ.ಪಿ.ಎಫ್ ನಿರ್ವಹಣೆ, ಎಸಿ ಬಿಲ್ಲು ಮತ್ತು ಡಿಸಿ ಬಿಲ್ಲುಗಳು ಹಾಗೂ ಧೇಯಕ ವಿಭಾಗಕ್ಕೆ ಸಂಬಂಧಿಸಿದ ಎಲ್ಲಾ ಕರ್ತವ್ಯಗಳು ಹಾಗೂ ಲೆಕ್ಕಪತ್ರ ವಿಭಾಗಕ್ಕೆ ಸಂಬಂಧಿಸಿದ ನಿಯತಕಾಲಿಕೆಗಳ ನಿರ್ವಹಣೆ ಅಭಿಲೇಖಾಲಯ ರವಾನೆ ಮತ್ತು ಸ್ವೀಕೃತಿ ವಿಭಾಗದ ಕೆಲಸಗಳ ಮೇಲುಸ್ತುವಾರಿ.<br>ಸಂಚಾರಿ ವಿಭಾಗಕ್ಕೆ ಸಂಬಂಧಿಸಿದ ಅವರಿಗೆ ನಿಯೋಜಿಸಿದ ಕರ್ತವ್ಯದ ವೇಳೆಯಲ್ಲಿ ಕಾರವಾರ ಬಂದರಿಗೆ ಆಗಮಿಸುವ ಹಡಗುಗಳ ಬರ್ತಿಂಗ್/ಆನ್‌ಬರ್ತಿಂಗ್‌ಗಳ ವೇಳೆಯಲ್ಲಿ ಮೂರಿಂಗ್ |

| | | |
|---|---|---|
| | | ಕರ್ತವ್ಯಗಳನ್ನು ನಿರ್ವಹಿಸುವುದು. ಕಾರವಾರ ಬಂದರಿನಲ್ಲಿ ನಡೆಯುವ ಸರಕು ಹೇರಿಳಿಸುವ ಚಟುವಟಿಕೆಗಳ ಮೇಲುಸ್ತುವಾರಿ, ಗೋದಾಮಿನಲ್ಲಿ ಸಂಗ್ರಹಿಸಿದ ಸರಕುಗಳ ವಿವರಗಳು ಹಾಗೂ ವಾಟರ್ ಬಾರ್ಜ್ ಮೂಲಕ ಪೂರೈಸಿದ ನೀರಿನ ವಿವರಗಳು ಸಂಚಾರಿ ವಿಭಾಗದ ಸಿಬ್ಬಂದಿಗಳ ಕರ್ತವ್ಯಗಳ ಮೇಲುಸ್ತುವಾರಿ ಹಾಗೂ ಮುಖ್ಯದ್ವಾರದಲ್ಲಿ ನಿಯೋಜಿಸುವ ಸಿಬ್ಬಂದಿಗಳ ಕರ್ತವ್ಯಗಳ ಮೇಲುಸ್ತುವಾರಿ ವಾರ್ಫ್ ಏರಿಯಾದಲ್ಲಿ ವಾರದ ಬಾಡಿಗೆ ಮೇಲೆ ಸರಕುಗಳನ್ನು ಸಂಗ್ರಹಿಸಿದಾಗ ಮೇಲುಸ್ತುವಾರಿ ಮತ್ತು ವರದಿ ನೀಡುವುದು ವಿದ್ಯುತ್ ಪೂರೈಕೆ ಮತ್ತು ವರದಿ ನೀಡುವುದು ISPS ಕೋಡ್ ನಡಿಯಲ್ಲಿ ನಿರ್ವಹಿಸಬೇಕಾದ ಕರ್ತವ್ಯಗಳು ಹಾಗೂ ಬಂದರು ಸಂರಕ್ಷಣಾಧಿಕಾರಿ (ಸಂಚಾರಿ) ಹಾಗೂ ಬಂದರು ಅಧಿಕಾರಿ, ಕಾರವಾರ ಇವರ ಮೌಖಿಕ ನಿರ್ದೇಶನದಂತೆ ಸಂಚಾರಿ ವಿಭಾಗದಲ್ಲಿನ ಕರ್ತವ್ಯಗಳ ನಿರ್ವಹಣೆ ಇತ್ಯಾದಿ. |
| 5. | ಶ್ರೀ ಎಸ್.ವಿ. ತಾಮಸೆ<br>ಉಪ ಬಂದರು ಸಂರಕ್ಷಣಾಧಿಕಾರಿ | ಮೀನುಗಾರಿಕಾ ನಾವೆಗಳ ನೋಂದಣಿ ಮತ್ತು ತಪಾಸಣೆ, ಹಾಯಿ ಹಡಗುಗಳ ನೋಂದಣಿ ಮತ್ತು ತಪಾಸಣೆ ಹಾಗೂ ಮೀನುಗಾರಿಕಾ ನಾವೆಗಳು ಹಾಗೂ ಹಾಯಿ ಹಡಗುಗಳಿಗೆ ಸಂಬಂಧಿಸಿದ ಎಲ್ಲಾ ವಿಷಯಗಳ ಕರ್ತವ್ಯ ನಿರ್ವಹಣೆ.<br>ಸಂಚಾರಿ ವಿಭಾಗಕ್ಕೆ ಸಂಬಂಧಿಸಿದಂತೆ ಅವರಿಗೆ ನಿಯೋಜಿಸಿದ ಕರ್ತವ್ಯ ವೇಳೆಯಲ್ಲಿ ಕಾರವಾರ ಬಂದರಿಗೆ ಆಗಮಿಸುವ ಹಡಗುಗಳ ಬರ್ತಿಂಗ್/ಅನ್‌ಬರ್ತಿಂಗ್‌ಗಳ ವೇಳೆಯಲ್ಲಿ ಮೂರಿಂಗ್ ಕರ್ತವ್ಯಗಳನ್ನು ನಿರ್ವಹಿಸುವುದು. ಕಾರವಾರ ಬಂದರಿನಲ್ಲಿ ನಡೆಯುವ ಸರಕು ಹೇರಿಳಿಸುವ ಚಟುವಟಿಕೆಗಳ ಮೇಲುಸ್ತುವಾರಿ, ಗೋದಾಮಿನಲ್ಲಿ ಸಂಗ್ರಹಿಸಿದ ಸರಕುಗಳ ವಿವರಗಳು ಹಾಗೂ ವಾಟರ್ ಬಾರ್ಜ್ ಮೂಲಕ ಪೂರೈಸಿದ ನೀರಿನ ವಿವರಗಳು ಸಂಚಾರಿ ವಿಭಾಗದ ಸಿಬ್ಬಂದಿಗಳ ಕರ್ತವ್ಯಗಳ ಮೇಲುಸ್ತುವಾರಿ ಹಾಗೂ ಮುಖ್ಯದ್ವಾರದಲ್ಲಿ ನಿಯೋಜಿಸುವ ಸಿಬ್ಬಂದಿಗಳ ಕರ್ತವ್ಯಗಳ ಮೇಲುಸ್ತುವಾರಿ ವಾರ್ಫ್ ಅಡಿಯಲ್ಲಿ ತೇಲು ನಾವೆಗಳ ನೋಂದಣಿ/ಪರವಾನಿಗೆ ವಾರ್ಷಿಕ ಪರಿಶೀಲನೆ ಕಛೇರಿಯ ಸಿಬ್ಬಂದಿಗಳ ಸೇವಾ ವಿಷಯಗಳ ಲೆಕ್ಕಪತ್ರ ನಿರ್ವಹಣೆ ಹಾಗೂ ವೇತನ ಬಟವಾಡೆ, ನೌಕಾ ಅಪಘಾತ ವರದಿ / ತನಿಖೆ, ಲೇಖನ ಸಾಮಗ್ರಿ ಮತ್ತು ಸರಕು ವಿಭಾಗದ ನಿರ್ವಹಣೆ, ಆಮದು ಮತ್ತು ರಫ್ತು ಶುಲ್ಕಗಳ ಆಕರಣೆ / ಸರ್ವಿಸ್ ಟ್ಯಾಕ್ಸ್ ಶುಲ್ಕಗಳ ಆಕರ ಹಾಗೂ ಕಛೇರಿಯ ಎಲ್ಲಾ ಕೆಲಸಗಳ ಮೇಲುಸ್ತುವಾರಿ. |
| 6. | ಶ್ರೀ ಸುರೇಶ ಡಿ. ಶೆಟ್ಟಿ<br>ಬಂದರು ಸಂರಕ್ಷಣಾಧಿಕಾರಿ (ಸಂಚಾರಿ) | ಕಾರವಾರ ಬಂದರಿಗೆ ಆಗಮಿಸುವ ಹಡಗುಗಳ ಬರ್ತಿಂಗ್/ಆನ್‌ಬರ್ತಿಂಗ್‌ಗಳ ವೇಳೆಯಲ್ಲಿ ಮೂರಿಂಗ್ ಕರ್ತವ್ಯಗಳನ್ನು ನಿರ್ವಹಿಸುವುದು, ಕಾರವಾರ ಬಂದರಿನಲ್ಲಿ ನಡೆಯುವ ಸರಕು ಹೇರಿಳಿಸುವ ಚಟುವಟಿಕೆಗಳ ಮೇಲುಸ್ತುವಾರಿ, ಗೋದಾಮಿನಲ್ಲಿ ಸಂಗ್ರಹಿಸಿದ ಸರಕುಗಳ ವಿವರಗಳು ಹಾಗೂ ವಾಟರ್ ಬಾರ್ಜ್ ಮೂಲಕ ಪೂರೈಸಿದ ನೀರಿನ ವಿವರಗಳು ಹಾಗೂ ವಾರ್ಫ್ ಏರಿಯಾದಲ್ಲಿ ವಾರದ ಬಾಡಿಗೆ ಮೇಲೆ ಸರಕುಗಳನ್ನು ಸಂಗ್ರಹಿಸಿದಾಗ ಮೇಲುಸ್ತುವಾರಿ ಮತ್ತು ವರದಿ ನೀಡುವುದು ವಿದ್ಯುತ್ ಪೂರೈಕೆ ಮತ್ತು ವರದಿ ನೀಡುವುದು ISPS ಕೋಡ್ ನಡಿಯಲ್ಲಿ ನಿರ್ವಹಿಸಬೇಕಾದ ಕರ್ತವ್ಯಗಳು ಸಂಚಾರಿ ವಿಭಾಗದ ಸಿಬ್ಬಂದಿಗಳ ಕರ್ತವ್ಯಗಳ ಮೇಲುಸ್ತುವಾರಿ, ಹಾಗೂ ಮುಖ್ಯದ್ವಾರದಲ್ಲಿ ನಿಯೋಜಿಸುವ ಸಿಬ್ಬಂದಿಗಳ ಕರ್ತವ್ಯಗಳ ಮೇಲುಸ್ತುವಾರಿ ಬಂದರು ಚಟುವಟಿಕೆಗಳಿಗೆ ಸಂಬಂಧಿಸಿದ ಶುಲ್ಕಗಳ ಆಕರಣೆ ಮತ್ತು ಬಂದರು ಆಡಳಿತಕ್ಕೆ ಸಂಬಂಧಿಸಿದ ವಿಭಾಗದ ಕರ್ತವ್ಯಗಳು, ಹಾರ್ಬರ್ ಕ್ರಾಫ್ಟ್ ನಿಯಮಗಳ ಅಡಿಯಲ್ಲಿ ಪರವಾನಿಗೆ ಸಾರಂಗ ಪ್ರಮಾಣ ಪತ್ರ ನೀಡುವುದು ಹಾಗೂ ಸಂಚಾರಿ ವಿಭಾಗಕ್ಕೆ ಸಂಬಂಧಿಸಿದ ಕರ್ತವ್ಯಗಳ ಮೇಲುಸ್ತುವಾರಿ ಇತ್ಯಾದಿ ವಿಷಯಗಳು. |

| | | |
|---|---|---|
| 7. | ಶ್ರೀ ಬಿ. ಬಿತುಮರಿಕೊಪ್ಪ<br>ಬಂದರು ಸಂರಕ್ಷಣಾಧಿಕಾರಿ | ಬಂದರು ಭೂಮಿಯ ನಿರ್ವಹಣೆ, ಇಲಾಖಾ ಕಟ್ಟಡಗಳ ಬಾಡಿಗೆ ವಸೂಲಾತಿ ನೌಕಾ ಉದ್ದಿಮೆದಾರರಿಗೆ ಬಂದರು ಚಟುವಟಿಕೆಗಳಿಗೆ ಪೂರಕವಾದ ಉದ್ದೇಶಗಳಿಗೆ ಬಂದರು ಭೂಮಿಯನ್ನು ಗುತ್ತಿಗೆ/ಬಾಡಿಗೆಯ ಮೇಲೆ ನೀಡುವುದು ಹಾಗೂ ಬಾಡಿಗೆ ವಸೂಲಾತಿ, ಪುನರ್‌ವಸತಿ/ಅತಿಕ್ರಮಣ ತೆರವಿಗೆ ಸಂಬಂಧಿಸಿದ ವಿಷಯ, ಇಲಾಖಾ ವಸತಿ ಗೃಹಗಳ ಮತ್ತು ಇಲಾಖಾ ಕಟ್ಟಡಗಳ ಬಾಡಿಗೆ ವಸೂಲಾತಿ ಹಾಗೂ ಬಂದರು ಭೂಮಿಗೆ ಮತ್ತು ಇಲಾಖಾ ಕಟ್ಟಡ ಮತ್ತು ಸ್ಥಿರಾಸ್ತಿಗಳಿಗೆ ಸಂಬಂಧಿಸಿದ ಎಲ್ಲಾ ವಿಷಯಗಳ ಕರ್ತವ್ಯ ನಿರ್ವಹಣೆ. |
| 8. | ಶ್ರೀ ದೀಪಕ ಪರುಳೇಕರ<br>ಉಪ ಬಂದರು ಸಂರಕ್ಷಣಾಧಿಕಾರಿ | ಸಿಬ್ಬಂದಿ ವಿಭಾಗದ ನಿರ್ವಹಣೆ, ಸೇವಾ ಪುಸ್ತಕಗಳ ನಿರ್ವಹಣೆ, ವಾರ್ಷಿಕ ಬಡತಿ, ರಜೆ ಮಂಜೂರಾತಿ ಸಂಬಂಧಿಸಿದ ವಿಷಯಗಳು ಇಲಾಖಾ ಗೋದಾಮಿನಲ್ಲಿ ಸಂಗ್ರಹಿಸಿದ ಸರಕುಗಳ ವಿವರಗಳು, ಹಡಗುಗಳಿಗೆ ನೀರನ್ನು ಸರಬರಾಜು ಮಾಡಿದ ಬಗ್ಗೆ ಶುಲ್ಕ ಆಕರಣೆ ಹಾಗೂ ವಿದ್ಯುತ್ ಪೂರೈಕೆ ಶುಲ್ಕ ಆಕರಣೆ, ಇಲಾಖಾ ತೇಲು ನಾವೆಗಳ ನಿರ್ವಹಣೆ ಹಾಗೂ ಸಿವಿಲ್/ಮೆಕ್ಯಾನಿಕಲ್ ಕಾಮಗಾರಿಗಳಿಗೆ ಸಂಬಂಧಿಸಿದ ವಿಷಯಗಳು ಮತ್ತು ನಿರುಪಯುಕ್ತ ವಸ್ತುಗಳ ವಿಲೇವಾರಿ ಮತ್ತು ಸಿಬ್ಬಂದಿ ಹಾಗೂ ಜಿಎನ್‌ಎಲ್ ವಿಭಾಗಕ್ಕೆ ಸಂಬಂಧಿಸಿದ ಎಲ್ಲಾ ಕರ್ತವ್ಯಗಳ ನಿರ್ವಹಣೆ, ಏರಿಯಾದಲ್ಲಿ ವಾರದ ಬಾಡಿಗೆ ಮೇಲೆ ಸರಕುಗಳನ್ನು ಸಂಗ್ರಹಿಸಿದ್ದಾಗ ಮೇಲುಸ್ತುವಾರಿ ಮತ್ತು ವರದಿ ನೀಡುವುದು ವಿದ್ಯುತ್ ಪೂರೈಕೆ ಮತ್ತು ವರದಿ ನೀಡುವುದು ISPS ಕೋಡ್‌ನಡಿಯಲ್ಲಿ ನಿರ್ವಹಿಸಬೇಕಾದ ಕರ್ತವ್ಯಗಳು ಹಾಗೂ ಬಂದರು ಸಂರಕ್ಷಣಾಧಿಕಾರಿ (ಸಂಚಾರಿ) ಹಾಗೂ ಬಂದರು ಅಧಿಕಾರಿ, ಕಾರವಾರ ಇವರ ಮೌಖಿಕ ನಿರ್ದೇಶನದಂತೆ ಸಂಚಾರಿ ವಿಭಾಗದಲ್ಲಿನ ಕರ್ತವ್ಯಗಳ ನಿರ್ವಹಣೆ ಇತ್ಯಾದಿ. |
| 9. | ಶ್ರೀ ಸಾಯಿನಾಥ.ಜಿ.ಕೇರಕರ<br>ಡ್ರೈವರ್ ಗ್ರೇಡ್ – II | ಸಂಚಾರಿ ವಿಭಾಗಕ್ಕೆ ಸಂಬಂಧಿಸಿದಂತೆ ಅವರಿಗೆ ನಿಯೋಜಿಸಿದ ಕರ್ತವ್ಯ ವೇಳೆಯಲ್ಲಿ ಕಾರವಾರ ಬಂದರಿಗೆ ಆಗಮಿಸುವ ಹಡಗುಗಳ ಬರ್ತಿಂಗ್/ಅನ್‌ಬರ್ತಿಂಗ್‌ಗಳ ವೇಳೆಯಲ್ಲಿ ಮೂರಿಂಗ್ ಕರ್ತವ್ಯಗಳನ್ನು ನಿರ್ವಹಿಸುವುದು. ಕಾರವಾರ ಬಂದರಿನಲ್ಲಿ ನಡೆಯಲು ಸರಕು ಹೇರಿಳಿಸುವ ಚಟುವಟಿಕೆಗಳ ಮೇಲುಸ್ತುವಾರಿ, ಗೋದಾಮಿನಲ್ಲಿ ಸಂಗ್ರಹಿಸಿದ ಸರಕುಗಳ ವಿವರಗಳು ಹಾಗೂ ವಾಟರ್ ಬಾರ್ಜ್ ಮೂಲಕ ಪೂರೈಸಿದ ನೀರಿನ ವಿವರಗಳು ಸಂಚಾರಿ ವಿಭಾಗದ ಸಿಬ್ಬಂದಿಗಳ ಕರ್ತವ್ಯಗಳ ಮೇಲುಸ್ತುವಾರಿ ಹಾಗೂ ಮುಖ್ಯದ್ವಾರದಲ್ಲಿ ನಿಯೋಜಿಸುವ ಸಿಬ್ಬಂದಿಗಳ ಕರ್ತವ್ಯಗಳ ಮೇಲುಸ್ತುವಾರಿ ವಾರ್ಫ್ ಏರಿಯಾದಲ್ಲಿ ವಾರದ ಬಾಡಿಗೆ ಮೇಲೆ ಸರಕುಗಳನ್ನು ಸಂಗ್ರಹಿಸಿದ್ದಾಗ ಮೇಲುಸ್ತುವಾರಿ ಮತ್ತು ವರದಿ ನೀಡುವುದು ವಿದ್ಯುತ್ ಪೂರೈಕೆ ಮತ್ತು ವರದಿ ನೀಡುವುದು, ISPS ಕೋಡ್ ನಡಿಯಲ್ಲಿ ನಿರ್ವಹಿಸಬೇಕಾದ ಕರ್ತವ್ಯಗಳು ಹಾಗೂ ಬಂದರು ಸಂರಕ್ಷಣಾಧಿಕಾರಿ (ಸಂಚಾರಿ) ಹಾಗೂ ಬಂದರು ಅಧಿಕಾರಿ, ಕಾರವಾರ ಇವರ ಮೌಖಿಕ ನಿರ್ದೇಶನದಂತೆ ಸಂಚಾರಿ ವಿಭಾಗದಲ್ಲಿನ ಕರ್ತವ್ಯಗಳ ನಿರ್ವಹಣೆ ಇತ್ಯಾದಿ. |

ಈ ಕಛೇರಿಯ ಅಧಿಕಾರಿಗಳು ಮತ್ತು ನೌಕರರು ಕಛೇರಿ ಕೈಪಿಡಿ ಕಾರ್ಯ ವಿಧಾನದಲ್ಲಿ ಹಾಗೂ ಇಲಾಖೆಗೆ ಸಂಬಂಧಿಸಿದ ಅಧಿನಿಯಮ / ನಿಯಮಗಳ ವಿಧಿಸಲಾದ ಕಾರ್ಯ ವಿಧಾನಕ್ಕೆ ಅನುಸಾರವಾಗಿ ಕೆಲಸ ನಿರ್ವಹಿಸುತ್ತಾರೆ.

3. ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2005 ರ ಸೆಕ್ಷನ್ 5 ಪ್ರಕಾರ ಈ ಕಛೇರಿಗೆ ಸಂಬಂಧಿಸಿದ ಕೆಳಕಂಡ ಪ್ರಾಧಿಕಾರಿಗಳನ್ನು ಗೊತ್ತು ಪಡಿಸಲಾಗಿದೆ.

| | | |
|---|---|---|
| ಪ್ರಕರಣ 2 ಖಂಡ (ಸಿ) | ಬಂದರು ಅಧಿಕಾರಿಯವರ ಕಛೇರಿ ಬೈತಖೋಲ ಕಾರವಾರ–581 302 | ಸಾರ್ವಜನಿಕ ಪ್ರಾಧಿಕಾರ |
| ಪ್ರಕರಣ 2 ಖಂಡ (ಬಿ)<br>ಮಾಹಿತಿ ನೀಡುವ ಪ್ರಾಧಿಕಾರಿ | ಬಂದರು ಅಧಿಕಾರಿ, ಕಾರವಾರ | ಸಕ್ಷಮ ಪ್ರಾಧಿಕಾರ |
| ಪ್ರಕರಣ 7 ಅಪೀಲು ಪ್ರಾಧಿಕಾರ | ನಿರ್ದೇಶಕರು ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಬೈತಖೋಲ್ ಕಾರವಾರ–581 302. | |

ಈ ಅಧಿನಿಯಮದ ಪ್ರಕಾರ ಮಾಹಿತಿ ಪಡೆಯಲು ಇಚ್ಛಿಸುವವರು ಮೇಲ್ಕಂಡ ಪ್ರಾಧಿಕಾರಗಳಲ್ಲಿ ನಿಯಮಾನುಸಾರ ಮನವಿ ಸಲ್ಲಿಸಿ ಮಾಹಿತಿ ಪಡೆಯಲಾಗಿದೆ.

ಬಂದರು ಅಧಿಕಾರಿ,
ಕಾರವಾರ

**Statement showing the salary details employees of the Port Office, Karwar for the month of April 2008**

| Sl. No. | Name of the Officials Sriyuths | Designation | Pay Scale | Gross Salary |
|---|---|---|---|---|
| 1 | 2 | 3 | 4 | 5 |
| 1 | Capt. C. Swamy | Port Officer | 18150-26925 | 25870 |
| 2 | T.R. Naik | Port Conservator | 10000-18150 | 18581 |
| 3 | S.D. Shetty | Port Conservator, (Traffic) | 10000-18150 | 15655 |
| 4 | B.B. Tumarkoppa | Port Conservator | 10000-18150 | 15590 |
| 5 | M.J. Biliye | Dy. Port Conservator | 8000-14800 | 15135 |
| 6 | D.D. Parulekar | Dy. Port Conservator | 8000-14800 | 12524 |
| 7 | Gouse Ali | Dy. Port Conservator | 8000-14800 | 11027 |
| 8 | Yogesh Shetty | Dy. Port Conservator | 8000-14800 | 10445 |
| 9 | P.D. Taribagil | Dy. Ferries Inspector | 8000-14800 | 19823 |
| 10 | S.V. Tamse | Asst. Port Conservator | 6250-12000 | 9529 |
| 11 | M.L. Harikantra | Serant Grade-III | 6250-12000 | 14674 |
| 12 | Reshma.L.Harikantra | S.D.A. | 5800-10500 | 8128 |
| 13 | V.R. Naik | Light Keeper and Signaller | 5800-10500 | 9351 |
| 14 | U. Ramachandra Naik | Light Keeper and Signaller | 5200-8200 | 12166 |
| 15 | Giridhar Savant | Laskar | 5200-8200 | 9093 |
| 16 | P.D. Binage | Laskar | 5200-8200 | 9093 |
| 17 | Ramachandra.M.Naik | Laskar | 5200-8200 | 9093 |
| 18 | B.D. Binage | Laskar | 5200-8200 | 9093 |
| 19 | M.L. Naik | Laskar | 5200-8200 | 9093 |
| 20 | Raju Kunder | Laskar | 5200-8200 | 8944 |
| 21 | G.D. Pednekar | Laskar | 5200-8200 | 9093 |
| 22 | K.V. Naik | Laskar | 5200-8200 | 8944 |
| 23 | M.U. Achari | Laskar | 5200-8200 | 8449 |
| 24 | S.D. Mehata | Laskar | 5200-8200 | 8944 |
| 25 | N.M. Goankar | Laskar | 5200-8200 | 8944 |
| 26 | N.A. Gouda | Seamen | 5200-8200 | 7339 |
| 27 | H.Y. Batti | Seamen | 5200-8200 | 7822 |
| 28 | R.R. Hulswar | Seamen | 5200-8200 | 6879 |
| 29 | S.J. Aversakar | Seamen | 5200-8200 | 5191 |
| 30 | R. Anand | Seamen | 5200-8200 | 7209 |
| 31 | Ganu N.Ager | Seamen | 6250-12000 | 11633 |
| 32 | A.J. Lopies | Seamen | 6250-12000 | 12744 |
| 33 | M.R. Harikantra | Seamen | 5200-8200 | 7116 |
| 34 | S.D. Lopies | Toll keeper | 6250-12000 | 11633 |
| 35 | Shilpa.M. Gouda | Peon | 4800-7275 | 6749 |
| 36 | Guru.S.Savant | Laskar | 5200-8200 | 8312 |
| 37 | R.M. Bandari | Laskar | 5200-8200 | 8897 |
| 38 | D.A. Naik | Laskar | 5200-8200 | 9093 |
| 39 | R.N. Tandel | Laskar | 5200-8200 | 8897 |
| 40 | R.B. Chipkar | Laskar | 5200-8200 | 8947 |

**ಬಂದರು ಅಧಿಕಾರಿ,**
ಕಾರವಾರ

ಪಿ.ಆರ್. ನಂ. 618